# ಅಪರಂಜಿ

ಏಪ್ರಿಲ್ '96

ತಿಳಿನಗೆಯ ಕಾರಂಜಿ

ಯುಗಾದಿ ಸಂಚಿಕೆ



ಬಿಡಿ ಪ್ರತಿ : 10 ರೂ.



| ಗೌರವ ಸಲಹೆಗಾರರು: | ಚಂದಾ ವಿವರ: |
|---|---|
| ಶ್ರೀ ಅ. ರಾ. ಸೇ. | ಬಿಡಿ ಪ್ರತಿ: ರೂ. 3.50 |
| ಶ್ರೀ ಶೇಷಗಿರಿ | ವಾರ್ಷಿಕ ಚಂದಾ: ರೂ. 35 |
| ಸಂಪಾದಕ: | ಆಜೀವ ಚಂದಾ : ರೂ. 350 |
| ಶಿವಕುಮಾರ್ | ಯುಗಾದಿ ವಿಶೇಷಾಂಕ: ರೂ. 10/- |

ವಿಳಾಸ: ಅಪರಂಜಿ ಕಾರ್ಯಾಲಯ, 36, 6ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)

# ಈ ಸಂಚಿಕೆಯಲ್ಲಿ



ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3    ಅಕ್ಷರ ಜೋಡಣೆ: ಒಮೇಗಾ ಲೇಸರ್‌ಟೆಕ್, ಬೆಂಗಳೂರು 27

# ಅಪರಂಜಿ
(ತಿಳಿನಗೆಯ ಕಾರಂಜಿ)

**ಸಂಪುಟ 13** **ಎಪ್ರಿಲ್ 96** **ಸಂಚಿಕೆ-7**

ಶ್ರೀ ಧಾತೃನಾಮ ಸಂವತ್ಸರಾರಂಭದ ಈ ಶುಭ ಯುಗಾದಿಯಂದು ಓದುಗರಾದಿಯಾಗಿ ಎಲ್ಲ ಹಿತೈಷಿಗಳಿಗೆ ಭಗವಂತನು ಸಕಲ ಸನ್ಮಂಗಳವನ್ನುಂಟುಮಾಡಲೆಂದು ಅಪರಂಜಿ ಪ್ರಾರ್ಥಿಸುತ್ತಾಳೆ. ಧಾತೃ ಸಂವತ್ಸರದ ಹೆಸರು ನನಗೆ ಮೊದಲು ಪರಿಚಯವಾದದ್ದು ''ಧಾತೃ - ಈಶ್ವರ ಕ್ಷಾಮ'' ಎಂಬ ಪ್ರಯೋಗದಲ್ಲಿ. ನಮ್ಮ ಎಳೆಯ ಕಿವಿಗಳಿಗೆ ಅದು ಧಾತು ಈಶ್ವರ ಎಂದು ಕೇಳಿಸಿತ್ತು. ಅದು ಹೇಗೇ ಇರಲಿ ಈ ಚುನಾವಣೆಗಳ ನಂತರ ಯಾವ ಸರ್ಕಾರ ಬಂದರೂ ಅದು ನಮ್ಮ ದೇಶವನ್ನು ಆ ಕ್ಷಾಮದ ದಿನಗಳಿಗೆ ಎಳೆದೊಯ್ಯದಿರಲಿ ಎಂಬುದು ಅಪರಂಜಿಯ ಪ್ರಾರ್ಥನೆ.

ಈ ಬಾರಿ ಎಂದಿನಂತೆ ಅಪರಂಜಿಯ ಲೇಖಕ, ಲೇಖಕಿಯರು ನಿಮಗೆಲ್ಲಾ ಹಬ್ಬದೂಟ ಬಡಿಸಿದ್ದಾರೆ. ಅಕ್ಷರ ಜೋಡಣೆಗೆ ಚಿತ್ರ ರಚನೆಗೆ ಹೆಚ್ಚು ಹೆಚ್ಚಾಗಿ ಕಂಪ್ಯೂಟರ್ ಬಳಸಲಾಗಿದೆ. ಇವೆಲ್ಲದರ ಒಟ್ಟು ಪರಿಣಾಮ ನಿಮಗೆ ಸಂತಸ ನೀಡಿದರೆ ಅದನ್ನ ಪತ್ರ ಮುಖೇನ ನಮ್ಮೊಂದಿಗೂ ಹಂಚಿಕೊಳ್ಳಿ. ಈ ವಿಶೇಷ ಸಂಚಿಕೆಯ ತಯಾರಿಕೆಯಲ್ಲಿ ನೆರವಾದ ಒಮೆಗಾ ಲೇಸರ್‌ಟೆಕ್‌ನ ರವಿಯವರಿಗೂ, ರವಿಗ್ರಾಫಿಕ್ಸ್‌ನ ನಾಥ್ ಅವರಿಗೂ ಹಾಗೂ ಜಾಹಿರಾತು ಹೊರೆಯನ್ನು ಸಂತೋಷದಿಂದ ಭರಿಸಿದ ಎ.ಆರ್. ರಾಜಗೋಪಾಲ್ ಅವರಿಗೆ ಅಪರಂಜಿ ಅಭಾರಿ.

ಶುಭ ಹಾರೈಕೆಗಳೊಂದಿಗೆ

**- ಶಿವಕುಮಾರ್**




ಪ್ರಕಾಶ್

LAW ಸರಿಯಾಗಿದ್ದಿದ್ದರೆ, ಹವಾ- ಲಾ ಇರುತ್ತಿರಲಿಲ್ಲವೇನೋ!?



ರಜನೀಕಾಂತ್ ಅವರಿಂದ ರಾಜಕೀಯ ಪಕ್ಷಗಳಿಗೆ ಬೆಂಬಲವಿಲ್ಲ - ಮದ್ರಾಸ್ ಸುದ್ದಿ

ಅವರಿಗೆ ನಿಜಜೀವನದ ಅರಿವಾಗಿರಬೇಕು!!



ದಕ್ಷಿಣ ಆಫ್ರಿಕದ ಕ್ರಿಕೆಟ್ ತಂಡದವರ ಪೂರ್ವ ಸಿದ್ಧತೆ ಭರ್ಜರಿಯಾಗಿತ್ತು!!



ರಾಜ್ಯ ಬಜೆಟ್; 132 ಕೋಟಿ ಖೋತಾ. ನಂ ಮನೆ ಬಜೆಟ್ ತರಹಾನೇ!!



ಜೂನ್ ಒಂದರಿಂದ ರಾಜ್ಯಾದಂತ ಸಾರಾಯಿ ನಿಷೇಧ - ಸುದ್ದಿ

ಇದೇನು ಆಶ್ವಾಸನೆಯೋ, ಬೆದರಿಕೆಯೋ??



ಬ್ಯಾಂಡಿಟ್ ಕ್ವೀನ್ ಚಿತ್ರ ಪ್ರದರ್ಶನಕ್ಕೆ ಕೋರ್ಟ್ ತಡೆ - ಸುದ್ದಿ

ಫೂಲನ್ ದೇವಿಯನ್ನಂತೂ ತಡೆಯಲಾಗಲಿಲ್ಲ??



ಒನ್ ಡೇ ಪಂದ್ಯಕ್ಕೆ ಹೋಗ್ತೀಯೇನೋ ಅಂದರೆ, ಇಲ್ಲ, ಅಲ್ಲಿ ಇನ್ಸ್‌ಟೆಂಟ್ ರೀಪ್ಲೇ ಸಿಗೊಲ್ಲವಲ್ಲ ಅನ್ನೋದೇ??



ಕನ್ನಡ ಚಿತ್ರಗಳಿಗೆ ತೆರಿಗೆ ಪೂರ್ಣ ವಿನಾಯ್ತಿ -ಪತ್ರಿಕೆ

ಆದರೂ ಏಕೋ ಮಂದಿರಗಳು ಬಿಕೋ ಅನ್ನುತ್ತಿವೆ!!



'ಯುಗಾದಿ' ಸಮಯದಲ್ಲಿ ನಮ್ಮ ನಾಯಕರು 'ಗಾದಿ' ಯ ಬಗ್ಗೆ ಮಾತ್ರ ಗಮನವಿಡದಿರಲಿ!

---



''ಸ್ವರ್ಗ ಹೀಗಿರುತ್ತೆ ಅಂತ ಗೊತ್ತಿದ್ರೆ, ಅಷ್ಟು ಸರ್ತಿ ತಿರುಪತೀಲಿ ಕ್ಯೂ ನಿಲ್ತಾನೇ ಇರ್ಲಿಲ್ಲ.''

# ಕನ್ನಡ ಕುವರಿ

**ಪ್ರೊ॥ ಕೆ.ಎಸ್. ನಿಸಾರ್ ಅಹಮದ್**

ಫ್ರೀ ಇಂಡಿಯಾ ಕಾನ್ವೆಂಟ್ ಎದುರು
ಮಾಟವಾದ ಮಗು ಕುಳ್ತಿತ್ತು;
ಯಾಕೊ ಏನೊ ಪಾಪ, ಒಂದೇ ಸಮ ಅಳ್ತಿತ್ತು.
''ಯಾಕಳ್ತಿ ಮರಿ?
ಏನ್ ನಿನಗಂಥ ವರಿ?''
ಮೃದುವಾಗಿ ವಿಚಾರಿಸ್ದೆ.
ಮಗು ಅಳ್ತಾನೇ ಇತ್ತು ಮಾತಾಡೋ ಆಸಕ್ತಿ ತೋರಿಸ್ದೆ.
''ಅಪ್ಪ ಇಲ್ವ ನಿಂಗೆ?''
''ಉಹುಂ''
''ಹೋಗ್ಲಿ, ಅಮ್ಮ?''
''ಉಹುಂ''
''ಅಯ್ಯೊ ಪಾಪ! ಮತ್ತ್ಯಾರಿದಾರೆ ಪೋರಿ?''
ನುಡಿ ಮುತ್ತು ಉದುರಿಸಿದಳು
ಕನ್ನಡದ ಕುವರಿ
ಸಂಕೋಚಾನ ದೂರ ದೂಡಿ :
''ಮಮ್ಮಿ ಅಂಡ್ ಡ್ಯಾಡಿ!''

*(ನಿಸಾರರ ''ಸಮಗ್ರ ಕವಿತೆಗಳು'' ಗ್ರಂಥದಿಂದ ಆಯ್ಕೆ ಮಾಡಿದ್ದು.)*

# ಭಾಷೆ ಏನ್ರೀ ಮಹಾ!

**ಶೈಲಜಾ ಪ್ರಭಾಕರ**

ನನ್ನ ಭಾಷಾ ಪ್ರೌಢಿಮೆಯನ್ನು ಉತ್ತಮಪಡಿಸಿಕೊಳ್ಳಬೇಕು ಎಂಬುದೊಂದು ಹುಳು ಒಂದು ದಿನ ನನ್ನ ತಲೆಯನ್ನು ಹೊಕ್ಕಿಬಿಟ್ಟಿತು. ಅದೇ ಮಂತ್ರವನ್ನು ಕಿವಿಯೊಳಗೆ ಕೊರೆಯತೊಡಗಿತು.

ಆಗ ನಾನಿದ್ದದ್ದು ಕೇಂದ್ರ ಸರಕಾರದ ಕಛೇರಿಯಲ್ಲಿ. ಕನ್ನಡದಲ್ಲಿ ''ಅದ್ಭುತ'' ಜ್ಞಾನವಿದ್ದ ಏಕಮಾತ್ರ ವ್ಯಕ್ತಿ ಎಂಬ ಬಿರುದು ಪಡೆದಿದ್ದೆ. ಇಂಗ್ಲೀಷ್ ಪರಿಸರ, ಸಂಗೀತ ಎಂದರೆ ಅತ್ಯಾಸಕ್ತಿ ಇದ್ದ ತಮಿಳರೊಬ್ಬರು ನನ್ನ ಬಳಿ ಪುರಂದರದಾಸರ ಪದಗಳಲ್ಲಿ ಬರುವ ಶಬ್ದಗಳ ಅರ್ಥವನ್ನೆಲ್ಲಾ ಕೇಳಿ ತಿಳಿದುಕೊಳ್ಳುತ್ತಿದ್ದರು. ಸಂದರ್ಭಕ್ಕೆ ತಕ್ಕ ಹಾಗೆ ಉಪಯೋಗಿಸಲು ಕಲಿತುಕೊಳ್ಳುತ್ತಿದ್ದರು. ಟೈಪಿಣಿಯ ಬಳಿ ಹೋಗಿ, ''ಟೈಪು ಮಾಡಲು ನನಗೆ ಬರುವುದಿಲ್ಲ ನಾನು ಮಂದಮತಿ'' ಎಂದು ಹೇಳಿಕೊಂಡು, ಆಕೆ ಪುನ: ನನ್ನ ಬಳಿ ಬಂದು 'ಮಂದಮತಿ' ಶಬ್ದದ ಅರ್ಥ ಕೇಳಿದ್ದಳು.

ಬಿ.ಎಂ. ಶ್ರೀಯವರು ತಮಿಳು ಕಲಿತಿದ್ದರಂತೆ. ಹಾಗೆಂದು ಯಾರೋ ಹೇಳಿದ್ದು ಕೇಳಿ ನಾನು ತಮಿಳು ಕಲಿಯುವ ಮನಸ್ಸು ಮಾಡಿದೆ. ಹುಳು ತಲೆ ಕಡಿಯುವುದನ್ನು ಕಡಿಮೆ ಮಾಡಿತು.

ಯಾವಾಗಲೂ ಪುರುಸೊತ್ತಾಗಿರುತ್ತಿದ್ದ ಟೈಪಿಣಿಯೊಬ್ಬಳನ್ನು ಹಿಡಿದೆ. ಆಕೆ ಊರಗಲ ಹಲ್ಲು ಬಿಟ್ಟು ''ಯಸ್ಸಾ? ಯುವಾಂಟು ಲರ್ನಾ?'' ಎಂದು ಸಂತೋಷದಿಂದ ಅ ಆ ಇ ಈ ಬರೆದುಕೊಟ್ಟಳು. ಇಪ್ಪತ್ತೈದೇ ಅಕ್ಷರಗಳಿದ್ದವು. ಏನಾದರೂ ಮರೆತಳೇನೋ ಎಂದು ಕೇಳಿದೆ. ''ಅವಳದಾ'' ಎಂದಳು. ಕೆಲಸ ಸುಲಭವಾಯಿತು ಎಂದುಕೊಂಡೆ. ಆ ಅಕ್ಷರಗಳನ್ನು ರಂಗೋಲಿಯಂತೆ ತಿದ್ದಿ ಹಾಕಿದೆ. ಒಂದು ವಾರದ ನಂತರ ಆಕೆಯ ಬಳಿ ಹೋದೆ. ಆಕೆ ನಾಪತ್ತೆ! ಟ್ರಾನ್ಸ್‌ಫರ್ ಮಾಡಿಸಿಕೊಂಡು ಓಡಿಹೋಗಿದ್ದಳು. ಆಕೆ ಅದಕ್ಕಾಗಿಯೇ ಕಾಯುತ್ತಿದ್ದಳಂತೆ. ಈಗ ನನಗೆ ಯಾವ ಅಕ್ಷರ ಯಾವುದು ಎಂದು ಹೇಳಿಕೊಡುವವರಿಲ್ಲವಾಯಿತು.

ಅದೇ ಹೊತ್ತಿಗೆ ನಾನೂ ಆ ಕೆಲಸ ಬಿಡಬೇಕಾಯಿತು. ಹೊಸ ಸ್ಥಳದಲ್ಲಿ ಸಂಶೋಧನೆಗೆ ಅವಕಾಶವಿತ್ತು. ದೂರದರ್ಶಕ (ದೂರದರ್ಶನ ಅಲ್ಲ!) ಉಪಯೋಗಿಸಲು ಪದೇ ಪದೇ ಕಾವಲೂರಿಗೆ ಹೋಗಬೇಕಾಗುತ್ತಿತ್ತು. ಇದ್ದದ್ದು ಒಂದೇ ಜೀಪು. ಆಗಾಗ್ಗೆ ಕೆಡುತ್ತಿದ್ದುದು. ಕೊನೆಗೆ ''ಆಸ್ಪತ್ರೆ'' ಸೇರಿದಾಗ ನಾವುಗಳು ರೈಲು, ಬಸ್ಸು ಹಿಡಿದು ಸಾಹಸ ಮಾಡಬೇಕಾಯಿತು. ಜತೆಯಲ್ಲಿ ಯಾರಾದರು ಇರುತ್ತಿದ್ದಾಗ ಅದು ಸಮಸ್ಯೆಯಾಗುತ್ತಿರಲಿಲ್ಲ. ಆದರೆ ಒಂಟಿಯಾಗಿ ಓಡಾಡುವ ಪ್ರಮೇಯಗಳು ಹೆಚ್ಚಾದವು.

ಜೋಲಾರ್ ಪೇಟೆಯಲ್ಲಿ ಇಳಿದ ಕೂಡಲೇ ನಾವು ಮಾಡುತ್ತಿದ್ದ ಮೊದಲ ಕೆಲಸವೆಂದರೆ ಓಂದಿರುಗಲು ''ಬೃಂದಾವನ್''ಗೆ ಟಿಕೆಟ್ ಮಾಡಿಸುವುದು. ಅದಕ್ಕಾಗಿ ಕೊಡುತ್ತಿದ್ದ ಅರ್ಜಿ ತಮಿಳಿನಲ್ಲಿರುತ್ತಿತ್ತು. ಹೆಚ್ಚು ಅಗಲ ಇರುವ ಕಾಲಂನಲ್ಲಿ ಹೆಸರು ಬರೆದು ಅಂದಾಜಿನ ಮೇಲೆ ಉಳಿದ ಕಾಲಂಗಳಲ್ಲಿ ವಯಸ್ಸು, ಲಿಂಗ, ಕ್ಲಾಸ್ ಬರೆಯುತ್ತಿದ್ದೆ. ಟಿಕೆಟ್ ಕೊಡುವಾತ ಗೊಣಗತೊಡಗಿದಾಗ ನಾನು ಯಾವುದೋ ಕಾಲಮ್ಮನ್ನು ಅದಲುಬದಲು ಮಾಡಿದ್ದೇನೆ ಎಂದು ತಿಳಿದುಕೊಳ್ಳುತ್ತಿದ್ದೆ. ಬಾಯಿ ಬಿಟ್ಟರೆ ಬಣ್ಣಗೇಡು. ಒಮ್ಮೆ ಟಿಕೆಟ್‌ನ ಹಿಂದೆ (ಈಗಿನಂತೆ Computer ಟಿಕೆಟ್ ಇರಲಿಲ್ಲವಲ್ಲ) ಸೀಟ್ ನಂಬರ್ ಇಲ್ಲದ್ದು ನೋಡಿ ''ಸೀಟ್ ನಂಬರ್''? ಎಂದು ಕೇಳಿದೆ. ''ಕೋಟಾವೇ ಕಡೆಯಾದು'' ಎಂದುತ್ತರ ಬಂದಿತು. ಮುಂದಿನ ವಾಕ್ಯಗಳು ನೆನಪಾಗಲಿಲ್ಲ. ಆ ವಾಕ್ಯವನ್ನು ನಾಲ್ಕೈದು ಸಲ ಜಪಿಸಿ, ಕಾವಲೂರು ಸೇರಿದ ಕೂಡಲೇ ಯಾರನ್ನೋ ಕೇಳಿ ಅರ್ಥ ತಿಳಿದುಕೊಂಡೆ. ಇದು ಮೊದಲ ಪಾಠ.

ಬಸ್ ಹತ್ತುವಾಗ ನಡೆದದ್ದು ಇದು. ಕಾವಲೂರು ಬಳಿಯ ಆಲಂಗಾಯಂ ಎಂಬ ಊರಿಗೆ ಹೋಗುವ ಬಸ್ಸು ಹಿಡಿಯಬೇಕು. ಬಸ್ಸಿನ ಬಾಗಿಲು ಹಿಡಿದು ''ಆಲಂಗಾಯಂ?'' ಎಂದು ಕೇಳುತ್ತಿದ್ದೆ. ನಾಲ್ಕೈದು ಜನ ಥಟ್ಟನೆ ಉತ್ತರಿಸುತ್ತಿದ್ದರು. ಒಮ್ಮೆ ''ಎರಂಗೋ'' ಎಂದಾಗ ಹತ್ತಿಬಿಟ್ಟೆ. ಹೊರಟಿದ್ದ ಬಸ್ಸು ಥಟ್ಟನೆ ನಿಂತಿತ್ತು. ತರಾವರಿ ವಾಕ್ಯಗಳ ಸುರಿಮಳೆ ಆಯಿತು. ನಾನು ಇಳಿದಕೂಡಲೇ ಬಸ್ಸು ಹೊರಟಿದ್ದರಿಂದ ಅದು ನಾಟ್ರಂಪಳ್ಳಿಯ ಬಸ್ಸು, ಆಲಂಗಾಯಂಗೆ ಹೋಗುವುದಿಲ್ಲ ಎಂದು ತಿಳಿದುಕೊಂಡೆ.

ಅಂದು ಕಾವಲೂರಲ್ಲಿ ಎರಡನೇ ಪಾಠ ''ಎರಂಗೋ'' ಎಂದರೆ ''ಇಳಿಯಿರಿ'' ''ಏರಂಗೋ'' ಎಂದರೆ ''ಹತ್ತಿರಿ''. ಇದನ್ನು ಕಲಿಸಿದ ಪುಣ್ಯಾತ್ಮ ಇನ್ನೊಂದು ಉಪಾಯ ಸೂಚಿಸಿದ್ದ. ಅ ಆ ಎರಡು ಅಕ್ಷರ ಬರೆದು ತೋರಿಸಿದ ''ಆ'' ಇಂದ ಪ್ರಾರಂಭವಾಗುವ ಬೋರ್ಡ್ ಇದ್ದರೆ ಆ ಬಸ್ ಹತ್ತಿಬಿಡಿ ಎಂದ. ಈ ಉಪಾಯ ನನಗೂ ಹಿಡಿಸಿತು. ಅ ಆ ಕಲಿತುಬಿಟ್ಟೆ!

ಆದರೆ ಈ ಉಪಾಯ ಹೆಚ್ಚುದಿನ ನಡೆಯಲಿಲ್ಲ. ಆ ಬಸ್ಸನ್ನು ಜಮನಾಮತ್ತೂರ್ ಎಂಬ ಊರಿಗೆExtend ಮಾಡಿಬಿಟ್ಟರು. ಮೊದಲನೇ ದಿನ ''ಆ'' ಇಲ್ಲ ಎಂದು ನಾನು ಬಸ್ ಹತ್ತದೇ ನಿಂತಾಗ ಕಂಡಕ್ಟರನೇ ಕೂಗಿ ಕರೆದು ''ಅಬ್ಸರ್ವೇಟರಿ ಏರಂಗೋ'' ಎಂದು ಹತ್ತಿಸಿಕೊಂಡ.

ಈಗ 'ಅ' ಯಿಂದ 'ಜ' ವರೆಗೆ ಅಕ್ಷರ ಕಲಿತುಕೊಳ್ಳಲು ಅವಕಾಶ ಸಿಕ್ಕಿತು ಎಂದು ನಿಮ್ಮಂತೆ ನನ್ನ ತಲೆಯಲ್ಲಿನ ಹುಳುವೂ ಭಾವಿಸಿತ್ತು. ಆದರೆ ಆ ಪ್ರಮೇಯ ಬರಲೇ ಇಲ್ಲ. ತಮಿಳಿನ 'ಜ' ಕನ್ನಡದ 'ಜ' ಇದ್ದಹಾಗೆಯೇ ಇದೆ.

ಈ ಮಧ್ಯೆ ನನ್ನ ಶಬ್ದ ಭಂಡಾರ ವಿಸ್ತಾರವಾಗುತ್ತಿತ್ತು ಎಂಬುದಂತೂ ನಿಜ. ಕಾವಲೂರು ಕುಗ್ರಾಮ ಕಾಡಿನೊಳಗಿನ ಒಂದು ಹಳ್ಳಿ ಒಂದಿಬ್ಬರು ತೆಲುಗರನ್ನು ಬಿಟ್ಟರೆ

ಬಾಕಿ ಎಲ್ಲಾ ತಮಿಳೇ, ಹೈಸ್ಕೂಲಿಗೆ, ರೇಷನ್‌ಗೆ, ಡಾಕ್ಟರ್‌ಗೆ ಎಲ್ಲದಕ್ಕೂ 11 ಕಿ.ಮೀ ದೂರದ ಆಲಂಗಾಯಂಗೇ ಬರಬೇಕಾದ ಪರಿಸ್ಥಿತಿ (ರಾಜೀವ್‌ಗಾಂಧಿ ಭೇಟಿಕೊಟ್ಟು ಹೋದ ಮೇಲೆ ಪರಿಸ್ಥಿತಿ ಸುಧಾರಿಸಿದೆ). ಒಬ್ಬ ಇಂಜನಿಯರ್ ಹೊಸದಾಗಿ ಸೇರಿದರು. ಒಮ್ಮೆ ನಾನು ಹೋಗಿ ಇನ್ನೂ ಊಟಮಾಡುತ್ತಿದ್ದಾಗಲೇ ಓಡಿಬಂದು ಮಾತನಾಡಿಸಿದರು. ಅವರು ಹುಬ್ಬಳ್ಳಿಯವರು. ಕೆಲಸಕ್ಕೆ ಅರ್ಜಿಹಾಕಿದಾಗ ಅವರಿಗೆ ಈ ಕುಗ್ರಾಮ ಅದರಲ್ಲೂ ತಮಿಳು ಪರಿಸರದಲ್ಲಿ ಕೆಲಸ ಮಾಡಬೇಕೆಂದು ಗೊತ್ತಿರಲಿಲ್ಲವಂತೆ. ಆದ್ದರಿಂದ ಅವರಿಗೆ ತುಂಬಾ ನಿರಾಶೆ, ಸಿಟ್ಟು, ಬೇಸರ ಎಲ್ಲಾ ಬಂದಿದೆಯಂತೆ. ಕನ್ನಡದವರು ಮಾತನಾಡಲು ಸಿಕ್ಕರೆ ಸಾಕೇ ಎನಿಸುತ್ತಿತ್ತಂತೆ.

ನಾನು ಊಟ ಮುಗಿಸಿ ಕೈ ತೊಳೆಯಲು ಹೊರಟೆ ''ನಳ ಬಂದದ್ರೀ'' ಎಂದರು. ನನಗೆ ಏನೆಂದು ತಿಳಿಯಲಿಲ್ಲ. ಪುನಃ ''ನಳ ಬಂದದೆ'' ಎಂದರೆ. ನಾನು ಅವರನ್ನೇ ನೋಡುತ್ತಾ ನಿಂತೆ. ''ನಳ ಅಂದ್ರ ನೀರು ಬರೋದು ನಲ್ಲಿ ಅಂತೀರಲ್ರಿ ಅದು'' ಎಂದರು. ನಾನು ಹೌದು ಇಲ್ಲಿ ನಲ್ಲಿ ಇದೆ. ಹಾಕಿ ಬಹಳ ದಿವಸ ಆದವು'' ಎಂದೆ. ಆಗವರು ''ಅಲ್ರೀ ಬಂದದ ಅಂದ್ರ ನಳದಾಗ ನೀರು ಬಂದ್ ಆಗೇದ'' ಎಂದರು. ನಲ್ಲಿಯಲ್ಲಿ ನೀರು ಬರುತ್ತಿಲ್ಲ ಎಂದು ಹೇಳುತ್ತಿದ್ದಾರೆ ಎಂದು ಆಗ ನನಗೆ ಹೊಳೆಯಿತು. ಏಕೆಂದರೆ ಬಕೀಟಿನಲ್ಲಿ ನೀರು ಇಟ್ಟಿದ್ದರು.

ನನ್ನ ತಲೆಯಲ್ಲಿನ ಹುಳು ನಕ್ಕಿತು. ನಿನ್ನ ಕನ್ನಡವನ್ನೇ ಮೊದಲು Improve ಮಾಡಿಕೋ ಎಂದಿತು.

ಆ ರಾತ್ರಿ ಕಂಪ್ಯೂಟರ್ ಕೆಟ್ಟಿತು. ಅದು ಇದ್ದದ್ದು ಕೆಳಗೆ. ದೂರದರ್ಶಕ ಇದ್ದುದು ಐದನೆಯ ಅಂತಸ್ತು. ಅಸಿಸ್ಟೆಂಟುಗಳು ಹತ್ತಿ ಇಳಿದು ಸುಸ್ತಾದರು ದೂರದರ್ಶಕದಿಂದ ಬರುತ್ತಿದ್ದ ಸಿಗ್ನಲ್ ಅನ್ನು (ಕಂಪ್ಯೂಟರ್) ಸ್ವೀಕರಿಸದೆ 'ಒಲ್ಲೆ' ಎಂದು ಕೂತಿತು. ಈ ಇಂಜಿನಿಯರ್‌ಗೆ ಹೇಳಿ ಕಳುಹಿಸಿದೆವು. ಬೆಳಗಿನ ಝಾವ 3 ಗಂಟೆ ಇರಬೇಕು. ಈತ ಕಣ್ಣುಜ್ಜುತ್ತಾ ಬಂದರು. ರಿಪೇರಿಗಾಗಿ ಮೇಲೆ ಕಾಯುತ್ತಾ ಕುಳಿತಿದ್ದಾಗ ನನಗೆ ''ನಳ ಬಂದದ'' ನೆನಪಾಯಿತು. ಈತನ ಜೊತೆ ಮಾತನಾಡಿದರೆ ಹುಬ್ಬಳ್ಳಿಯ ಶಬ್ದಗಳ ಪರಿಚಯ ಮಾಡಿಕೊಳ್ಳಬಹುದು ಎನ್ನಿಸಿತು. ಅಷ್ಟರಲ್ಲಿ ಅಸಿಸ್ಟೆಂಟ್ ಒಬ್ಬನೇ ಧಬಧಬನೆ ಹತ್ತಿ ಬಂದು ''ಪ್ಲೀಸ್ ಕಂ ಅರ್ಜೆಂಟ್'' ಎಂದು ನಮ್ಮೆಲ್ಲರನ್ನು (ಇಬ್ಬರನ್ನು) ಕರೆದುಕೊಂಡು ಹೋದ.

ಕೆಳಗೆ ಹೋಗಿ ನೋಡಿದಾಗ ಈ ಇಂಜಿನಿಯರು ಗಡಗಡ ನಡುಗುತ್ತಾ ಮಲಗಿದುದೇ ಅಲ್ಲದೆ ಬೆಬೆಬೆ ಎಂದು ತೊದಲುತ್ತಿದ್ದರು 'ಏನಾಯಿತು?' ಎಂದೆ ''ಛಳಿ ಛಳಿ'' ಎಂದರು ಗೆಸ್ಟ್‌ರೂಂನಿಂದ ಎರಡು ಕಂಬಳಿ ತರಿಸಿಕೊಟ್ಟೆ ಕಾಫಿ (ಕರಿಯದು) ಮಾಡಿ ಕೊಡಲು ಹೇಳಿದೆ. ಆಗ ಆ ಇಂಜಿನಿಯರು ''ಕೇಬಲ್‌ದೊಳಗೆ ಲೂಸ್ ಕನೆಕ್ಷನ್ ಇರ್ರೈತಿ ಅಂತ ಕೇಬಲ್ ಮುಟ್ಟಿದೇನ್ರಿ. ಅದು ಕಿತ್ತು ಕೈಯಾಗ ಬಂದು. ಇದೇನಪಾ ಅಂತ ನೋಡಿದೇನ್ರೀ... ಅದು ಹಾವಾಗಿತ್ರೀ ಭಯಂಕರ ನಾಗರಹಾವು. ನನಗೆ



ಕಚ್ಚಿಬಿಟ್ಟಿರಲಿಕ್ಕೇ ಬೇಕ್ರೀ...ಭಯಂಕರ ವಿಷ... ಇಲ್ಲಿ ಡಾಕ್ಟರೂ ಇಲ್ಲ...ನಾನು ಸತ್ತು ಹೋಗ್ತೀನ್ರೀ... ಮನ್ಯಾಗ ಆಕೀ .....ಸಣ್ಣ ಮಗು ಐತಿ....'' ಎಂದಾತ ಕಣ್ಣಲ್ಲಿ ನೀರುತಂದಾಗ ನನಗೆ ಭಯವಾಯಿತು. ಅಸಿಸ್ಟೆಂಟ್‌ನಿಗೆ ಅವರ ಕೈ ಕಾಲು ಪರೀಕ್ಷಿಸಲು ಹೇಳಿ ಉಳಿದವರೆಲ್ಲಾ ಕಂಪ್ಯೂಟರ್ ರೂಮ್‌ಗೆ ಹೋದೆವು. ಹಾವು ಎಲ್ಲೂ ಕಾಣಲಿಲ್ಲ. ಕೇಬಲ್‌ಗಳೆಲ್ಲಾ ಎಂದಿನಂತೆ (ಹಾವು ಎಂಬ ಭ್ರಮೆ ಬರುವಂತೆ) ನೇತಾಡಿಕೊಂಡಿದ್ದವು. ಪುನಃ ಮೇಲೆ ಬಂದಾಗ ಈತ ಎದ್ದು ಕುಳಿತು ಇನ್ನೂ ನಡುಗುತ್ತಿದ್ದರು. ''ಹಾವು ಕಚ್ಚಿಲ್ಲ, ಗುರುತಿಲ್ಲ'' ಎಂದು ಅಸಿಸ್ಟೆಂಟ್ ಹೇಳಿದ. ''ಅಲ್ಲಿ ಹಾವಿಲ್ಲ ನಿಮಗೆ ಖಂಡಿತಾ ಕಚ್ಚಿಲ್ಲ'' ಎಂದಾಗ ''ಇನ್ನೂ ಕುಂತಿರ್ತದೇನ್ರೀ? ಡಕ್ಟ್ (Duct) ದೊಳಕ್ಕೆ ಓಡಿಹೋತು'' ಎಂದು ತನ್ನ ಕೈಯನ್ನು ತೋರಿಸುತ್ತಾ ''ನೋಡ್ರೀ ಕೈ ನೀಲಿ ಆಗಲಿಕ್ಕೆ ಹತ್ತದ'' ಎಂದು ಅತ್ತರು ''ನಿಮಗೆ ಏನಾಗಿಲ್ಲ'' ಎಂದು ಎಲ್ಲರೂ ಹೇಳಿದರೂ ಗೋಳಾಟ ನಿಲ್ಲಲಿಲ್ಲ. ಆ ನಡುರಾತ್ರಿಯಲ್ಲಿ ಡ್ರೈವರ್ ಸಿಕ್ಕದೇ ಮೆಕ್ಯಾನಿಕ್ ಒಬ್ಬನನ್ನೇ ಎಬ್ಬಿಸಿ ಜೀಪಿನಲ್ಲಿ ಡಾಕ್ಟರರ ಬಳಿ ಕಳಿಸಿದ್ದಾಯಿತು.

ಹಾಗೇ ಆಲಂಗಾಯಂಗೆ ಹೋದ ಆತ ಪುನಃ ಕಾವಲೂರಿಗೆ ತಲೆ ಹಾಕಲಿಲ್ಲ. ರಾಜಿನಾಮೆ ಕೊಟ್ಟು ಹೊರಟೇಹೋದರಂತೆ.

ಅಂತೂ ನನ್ನ ಕನ್ನಡ ಅಧ್ಯಯನ ಕಾರ್ಯಕ್ರಮಕ್ಕೂ ಹೀಗೆ ಕಲ್ಲುಬಿತ್ತು. ಹುಳು ಪುನಃ ಕಡಿಯಲು ಆರಂಭಿಸತು.

ಅಹ್ಮದಾಬಾದ್‌ಗೆ ಹೋದಾಗ ಕಡಿತ ಹೆಚ್ಚಾಯಿತು. ಅಲ್ಲಿ ಅಂಗಡಿಯ ಹೆಸರು, ಸಾಮಾನಿನ ಹೆಸರು ಮಾತ್ರವಲ್ಲ ಬಿಲ್ಲುಗಳಲ್ಲಿ ಸಂಖ್ಯೆಗಳು, ಬಸ್ಸಿನ ನಂಬರು ಎಲ್ಲವೂ ಗುಜರಾತಿ. ಈಗ ಇದನ್ನು ಕಲಿಯಲೇ ಬೇಕೆಂದು ಹುಳು ಕಾಟ ಕೊಡತೊಡಗಿತು. ಏಕ್, ಬೇ, ತ್ರಣ್...ಹೀಗೆ ದಸ್ ವರೆಗೂ ಕಲಿತೆ ''ತಾರೋನಾಂಶುಛೆ'' ಎಂಬ ಪ್ರಥಮ

ವಾಕ್ಯವನ್ನು ಕಲಿತೆ. ಆಟೋದಲ್ಲಿ ಮೀಟರ್ ಏನೋ ಸಂಖ್ಯೆಯನ್ನು ತೋರಿಸುತ್ತಿತ್ತು ಅದಕ್ಕೊಂದು Conversion table ಡ್ರೈವರ್ ಬಳಿ ಇರುತ್ತಿತ್ತು. ಗುಜರಾತಿ ಸಂಖ್ಯೆ ತಿಳಿಯುತ್ತಿರಲಿಲ್ಲ. ಹಾಗಾಗಿ ನೂರರನೋಟು ಅಥವಾ ಐವತ್ತರ ನೋಟು ಕೊಟ್ಟು ಚಿಲ್ಲರೆ ತೆಗೆದುಕೊಳ್ಳುತ್ತಿದ್ದೆ. ಈಗ ಸಂಖ್ಯೆ ಕಲಿತೆ ಎಂದು ಸಂತೋಷ. ಆದರೆ ಆಟೋದವನು ''ಅಗ್ಯಾರ್ ಪಂಚೋತರ್'' ಎಂದಾಗ ಉತ್ಸಾಹ ಜರ್‍ರನೆ ಇಳಿಯಿತು ಪುನಃ 20ರ ನೋಟು ಕೊಟ್ಟು 9 1/4 ರೂ ವಾಪಸ್ ಪಡೆದೆ. ಆಮೇಲೆ ಡ್ರೈವರ್ ''ಕೆಟಲೇವಾಗೇ'' ಎಂದಾಗ ಏನು ಹೇಳಲೂ ತಿಳಿಯದೆ ಸುಮ್ಮನೆ ನಿಂತಿದ್ದೆ. ಅವನು ಪ್ರಶ್ನಾರ್ಥಕವಾಗಿ ನನ್ನ ಮುಖನೋಡಿ ಎರಡು ನಿಮಿಷ ಉತ್ತರಕ್ಕಾಗಿ ಕಾದು ಹೋದ (ಅವನು ಕೇಳಿದ್ದು Time ಎಷ್ಟು ಎಂದು ಆಮೇಲೆ ತಿಳಿಯಿತು)

ಆದರೆ ಈ ಸಮಸ್ಯೆ ಬೇಗ ಪರಿಹಾರವಾದದ್ದು, ಮಗು ಹೆಜ್ಜಯಿಟ್ಟು ಅಕ್ಕ ಪಕ್ಕದ ಮನೆಗಳಿಗೆ ಹೋಗಲು ಪ್ರಾರಂಭಿಸಿದ ಕೂಡಲೇ ಎನ್ನಬಹುದು. ಒಂದು ದಿನ ''ಮಮರಾ'' (ಕಡಲೆಪುರಿ) ಬೇಕು ಎಂದು ಗಲಾಟೆ ಮಾಡಿತು. ಇನ್ನೊಂದು ದಿನ ಬೀಗ ಕೈಯನ್ನು ಬೆನ್ನ ಹಿಂದೆ ಬಚ್ಚಿಟ್ಟುಕೊಂಡು ''ನಥಿ ಆಪೀಸ್'' ಎಂದು ಕಾಡಿಸಿತು (ಕೊಡುವುದಿಲ್ಲ) ಮತ್ತೊಂದು ದಿನ ಪಕ್ಕದ ಮನೆಗೆ 'ಮಹರಾಜ' ಬಂದಿದ್ದಾನೆ ಎಂದು ಸುದ್ದಿ ತಂದಿತು. ನಾನು ಮಹಾರಾಜನನ್ನು ಬಾಗಿಲ ಸಂದಿಯಲ್ಲೇ ಇಣಕಿ ನೋಡಿ ತೃಪ್ತಿ ಪಟ್ಟುಕೊಂಡೆ. (ಅಡಿಗೆ ಭಟ್ಟನಿಗೆ ಮಹಾರಾಜ ಎನ್ನುತ್ತಾರಂತೆ)

ಮತ್ತೊಂದು ದಿನ ವಟವಟಗುಟ್ಟುವ ಕೆಲಸದಾಕೆ ಮನೆಗೆ ಬಂದು ಹೋದ ಮೇಲೆ ''ಅಮ್ಮ ಹೋಗೋಣ'' ಎಂದಿತು ''ಎಲ್ಲಿಗೆ?'' ಎಂದೆ. ''ಕೆಳಗಡೆ ಮನೆಗೆ'' ಅಂದಿತು. ''ಯಾಕೆ?'' ಎಂದೆ. ''ಏನಮ್ಮಾ ಹೀಗೆ ಹೇಳ್ತೀ ಈಗ್ತಾನೆ ಶಕೂಬೆನ್ (ಕೆಲಸದವಳು) ಹೇಳಲ್ಲಿಲವಾ ಅಲ್ಲಿ ಪುಟ್ಟ ಪಾಪ ಬಂದಿದೇಂತ'' ಎಂದಿತು.

ನನ್ನ ತಲೆಯಲ್ಲಿದ್ದ ಭಾಷಾಪಾಂಡಿತ್ಯದ ಹುಳು ನಾಚಿ ನೀರಾಗಿ ಪುರ್‍ರನೆ ಹಾರಿ ಹೋಯಿತು.

★★★



ಸಧ್ಯ, ನೀನೇ ಗೆದ್ದೆಲ್ಲ!, ನನ್ನ ಮೀಸಲಾತಿ ಎಲ್ಲಿ ಹೋಗ್ಬಿಡತ್ತೋ ಅಂತ ಹೆದ್ರಿಕೆ ಆಗಿತ್ತು.

# ನಿಮ್ಮವ್ಮಲ್ಲಿ

ಮಾನ್ಯ ಸಂಪಾದಕರೇ,

ಮೊನ್ನೆ, ಅಂದ್ರೆ ಮಾರ್ಚ್ 96ರ ಅಪರಂಜಿ ಬಂದ ಎರಡು ದಿನದ ಮೇಲೆ ಚೆಂಗ ಬಂದಿದ್ದ. ಆಗ ನಡೆದ ಸಂಭಾಷಣೆಯನ್ನು ತಮ್ಮ ಹಾಗೂ ನಮ್ಮ ಅಪರಂಜಿ ಓದುಗರ ಗಮನಕ್ಕೆ ತರಲು ಈ ಪತ್ರ.

'ಸಾ....ನಂಗ್ಹೇಳಲೇ ಇಲ್ವಲ್ಲಾ ಸಾ....!'

''ನಾನು ನಿಂಗೆ ಏನು ಹೇಳಲಿಲ್ಲ ಚೆಂಗಾ....!?''

'ನಿಮ್ಗೆ ಯಾವ್ದೋ ರಾಕ್ಷಸನಿಂದ ತೊಂದ್ರೆ ಆಗಿದ್ಯಂತೆ....'

ಈಗಾಗಲೇ ಐದಾರು ಜನ ವಿಚಾರಿಸಿದ್ದರಿಂದ ನನಗೆ ಅರ್ಥ ಆಯ್ತು. ಮುದ್ರಾರಾಕ್ಷಸನ ಬಗ್ಗೆ ಅವನು ಹೇಳ್ತಿದಾನೆ ಅಂತ. ಮುದ್ರಣದಲ್ಲಿ ಮುದ್ದ'ಣ' ಮುದ್ದ'ಣ್ಣ' ಆದ ಬಗ್ಗೆ ತಿಳಿಸಿದೆ. ಮುದ್ದಣ ಯಾರು, ಏನು ಅಂತಲೂ ಹೇಳಿದೆ. ಅವನಿಗೆ ಬಹಳ ಇಂಪ್ರೆಸ್ ಆಯ್ತು.

'ಸಾ...ನೀವು ವರಿ ಮಾಡ್ಕೋಬೇಡೀ ಸಾ.... ಮುದ್ದ'ಣ' ಅನ್ನೋಕ್ಕಿಂತ ಮುದ್ದ'ಣ್ಣ' ಅನ್ನೋದೇ ಹೆಚ್ಚು ಸೂಕ್ತ ಸಾ....'

''ಅದು ಹೇಗೆ ಚೆಂಗಾ...?''

'ಅಲ್ಲಾ .... ಅವ್ನು ಬದ್ಕಿದ್ದಿದ್ದೇ ಕಮ್ಮಿ ದಿನ... ಪ್ರಸಿದ್ಧಿಗೆ ಬರೋ ಒತ್ಗೆ ತೀರ್ಕೊಂಡ್ಬುಟ್ಟ.... ಈಗ ಅವನ ನೂರ ಇಪ್ಪತ್ತೈದನೇ ಹುಟ್ಟು ಹಬ್ಬ ಅಂತೀರಿ..... ಅದ್ಕೇ ಹೆಚ್ಚು ಒತ್ತು ಕೊಟ್ಟಾಗಾಗ್ಲಿಲ್ವಾ ಸಾ.... ಮುದ್ದ'ಣ್ಣ' ಅಂದ್ರೆ....!'

ನಂಗೂ ಸರಿ ಅನ್ನಿಸ್ತು....ನಿಮಗೆ?

ವಂದನೆಗಳು,

**ಜಿ.ವಿ. ಅರುಣ**

ಪ್ರಿಯರೆ,

ಮಾರ್ಚಿ ತಿಂಗಳ 'ಅಪರಂಜಿ' ಕೈಸೇರಿದೆ. ಎಲ್ಲ ಓದುಗರ ಅಭಿಪ್ರಾಯದಂತೆ 'ಅಪರಂಜಿ' ಪ್ರತಿ ತಿಂಗಳೂ ತುಂಬು ಆಕರ್ಷಕವಾಗಿ 'ಕೊರವಂಜಿ'ಯ ಪರಂಪರೆಯನ್ನು ಮುಂದುವರಿಸುತ್ತಿದೆ.

ಆದರೆ ''ಹವಾಲಾನೇ? ಯಾರೇ ಅವಳು?'' ಲೇಖನದ ಮೊದಲ ಸಾಲು ''ಮೊನ್ನೆ ಅಂದರೆ ಎನ್.ಟಿ.ಆರ್. ಡಮಾರ್ ಆದರಲ್ಲಾ.....'' ಈ ಮಾತುಗಳ ಸಾಲು ''ಕೊರವಂಜಿ''ಯಲ್ಲಿ ಬರುತ್ತಿರಲಿಲ್ಲ.

ಅಪರಂಜಿ ಫೆಬ್ರವರಿ 96 ಸಂಚಿಕೆ ಪುಟ 33ರ ವ್ಯಂಗ್ಯ ಚಿತ್ರಕ್ಕೆ ಆಳುತ್ತಿರುವ ಇಬ್ಬರು ಮುಖ್ಯ ಮಂತ್ರಿಗಳ ಪ್ರಸ್ತುತತೆ ಇದೆ. ಕಂಗ್ರಾಟ್ಸ್!

ಅಪರಂಜಿ ಬೆಳಗಲಿ, ಬೆಳೆಯಲಿ. ಯುಗಾದಿ ಶುಭಾಷಯಗಳೊಂದಿಗೆ ವಂದನೆಗಳು.

ನಿಮ್ಮ ವಿಶ್ವಾಸದ,

**ಎ.ವಿ. ಕೇಶವಮೂರ್ತಿ**

ಮದ್ರಾಸ್

# ನಾನ್ ಪರ್‌ಫಾರ್ಮಿಂಗ್ ಅಸೆಟ್ಸ್

ರಾಮಿ

"ಪರವಾಗಿಲ್ಲ, ಕೋದಂಡು ಈಗೀಗ ಅದಕ್ಕೆ ಇದಕ್ಕೆ ಅಂತ ಚೆನ್ನಾಗಿ ಖರ್ಚು ಮಾಡ್ತಾ ಇದಾನೆ. ಒಳ್ಳೆಯ ಸಂಪಾದನೆ ಇರಬೇಕು" ಎಂದ ಮೂರ್ತಿ ಕರಿದವಕ್ಕಿಯಿಂದ ಗೋಡಂಬಿ ಆರಿಸ್ತಾ.

"ಹಯ್ಯೋ ...... ಸಂಪಾದನೆ ಅಷ್ಟರಲ್ಲಿಯೇ ಇದೆ" ಎಂದು ದನಿಗೂಡಿಸಿದ ಪ್ರಾಣೇಶ.

"ಅಧಿಕಾರದಲ್ಲಿದ್ದಾಗ ಅಸೆಟ್ಸ್ ಗಿಸೆಟ್ಸ್ ಮಾಡಿಟ್ಟುಕೊಂಡಿರಬಹುದು" ಅಂತಾನೆ ಮೂರ್ತಿ.

"ಅಸೆಟ್ಸ್ ಕೂಡಾ ಅಷ್ಟರಲ್ಲೇ ಇದೆ. ಏನಿದ್ದರೂ ನಾನ್ ಪರ್‌ಫಾರ್ಮಿಂಗ್ ಅಸೆಟ್ಸ್.... ಬ್ಯಾಂಕಿನೋರು ಹೇಳ್ತಾರಲ್ಲಾ ಹಾಗೆ" ಎಂದು ಕಾಫಿ ಗುಟುಕರಿಸಿದ ಪ್ರಾಣೇಶ

"ಹಾಗಂದರೆ.....?" ಮೂರ್ತಿ ಪ್ರಶ್ನಾರ್ಥಕ ಚಿನ್ಹೆಯಾದ

"ನಾನ್ ಪರ್‌ಫಾರ್ಮಿಂಗ ಅಸೆಟ್ಸ್ ಕಣೋ..... ಬ್ಯಾಂಕುಗಳು ಆಯವ್ಯಯ ಸರಿದೂಗಿಸೋಕ್ಕೆ ನಷ್ಟ ಕಡಿಮೆ ತೋರಿಸೋದಕ್ಕೆ ದಿವಾಳಿ ಟೇಬಲ್ ದೂರವಿಡೋದಕ್ಕೆ ಕಂಡು ಹಿಡಿದ ಹೊಸ ಪದಪುಂಜ - ನಾನ್‌ಪರ್‌ಫಾರ್ಮಿಂಗ್ ಅಸೆಟ್ಸ್!"

"ಅದಕ್ಕೂ ಕೋದಂಡುವಿನ ಅಸೆಟ್ಸ್‌ಗೂ ಏನು ಸಂಬಂಧಾಂತೀನಿ...."

"ಕೋದಂಡುವಿನ ಅಸೆಟ್ಸ್‌ಕೂಡ ಅಂತಾದ್ದೇ ಕಣೋ.... ಮನೆ ಕಟ್ಟಿಸೋದಕ್ಕೆ ಅಳೀಮಯ್ಯನಿಗೆ ಕೊಟ್ಟ ಸಾಲ, ಗುಳುಂ ಕಂಪನಿಗಳಲ್ಲಿ ತೊಡಗಿಸಿದ ಷೇರುಗಳ ಮೊತ್ತ ಇಂಥವನ್ನೆಲ್ಲ ಅಸೆಟ್ಸ್ ಅಂತ ಭಾವಿಸಿಕೊಂಡು ಕೈಲಿದ್ದದನ್ನು ಪುಡಿ ಮಾಡೋದಕ್ಕೆ ತೊಡಗಿದ್ದಾನೆ ಆತ. ಕೋದಂಡುವಿನ ಅಸೆಟ್ಸ್ ಕೂಡಾ ನಾನ್‌ಪರ್‌ಫಾರ್ಮಿಂಗ್ ಬಾಬ್ತುಗಳೇ ಕಣೋ. 'ಊಟಕ್ಕಿಲ್ಲದ ಉಪ್ಪಿನಕಾಯಿ' ಅಂತಾರಲ್ಲ ಹಾಗೆ, ಲೆಕ್ಕಕ್ಕೆ ಅಸ್ತಿ. ಉಪಯೋಗಕ್ಕಿಲ್ಲದ ಆಸ್ತಿ ಅಷ್ಟೆ! ಆಯವ್ಯಯ ಸರಿದೂಗಿಸಿ ತೋರಿಸೋದಕ್ಕೆ ಮಾತ್ರಾ ಲಾಯಖ್ಖು!" ಎಂದು ಗಹಗಹಿಸಿದ ಪ್ರಾಣೇಶ.

"ಒಳ್ಳೇ ಸೊಗಸಾದ ಐಡಿಯಾ ಕಣಯ್ಯ. ಇವತ್ತಿನ ದಿನಗಳಲ್ಲಿ ನಾನ್‌ಪರ್‌ಫಾರ್ಮಿಂಗ್ ಅಸೆಟ್ಸ್ ಇರುವವರನ್ನು ಹೆಚ್ಚಾಗಿ ಕಾಣಬಹುದು. ನೀನಂದ ಹಾಗೆ ಖೋಟಾ ಕಂಪನಿಗಳ ಷೇರುಗಳಲ್ಲಿ ತೊಡಗಿಸಿ ತಂಪಾಗಿರಬಹುದು. ಹಾಗೇನೆ ಅರ್ಧ ಬೆಲೆಗೆ ಗ್ರಾಹಕ ಸಂಸ್ಕೃತಿಯ ಆರಾಧಕರಿಗೆ ಬೇಕು ಬೇಕಾದ್ದನ್ನೆಲ್ಲಾ ಒದಗಿಸುವ

ಘಾಟಿ ಮಂದಿಗೆ ನೀಡಿದ್ದೂ, ಲಾಟರಿಗಳಲ್ಲಿ ತೊಡಗಿಸಿದ್ದೂ, ನಾನ್‌ಪರ್‌ಫಾರ್ಮಿಂಗ್ ಅಸೆಟ್ಸ್ ಅಂತಲೇ ಲೆಕ್ಕಕ್ಕೆ ತಗೊಂಡರೆ ಎಷ್ಟು ಚೆನ್ನ! ಕೈಗೆ ಬಾರದ ಸೈಟಿಗಾಗಿ ಸುರಿದದ್ದೂ, ಮಕ್ಕಳನ್ನ ಪ್ರತಿಸಾರಿ ಶಾಲೆಗೆ ಸೇರಿಸೋದಕ್ಕೆ ಕಕ್ಕಿದ್ದೂ, ಮೆಡಿಕಲ್ ಸೀಟಿಗಾಗಿ ಕಟ್ಟಿಟ್ಟಿದ್ದೂ, ಮುಳುಗಿಹೋದ ಸಂಪತ್ತು ಅಂತ ಯಾಕೆ ಭಾವಿಸಬೇಕು? ಒರು ಮಾದರಿ ನಾನ್‌ಪರ್‌ಫಾರ್ಮಿಂಗ್ ಅಸೆಟ್ಸ್ ಅಂತ ತಿಳಕೊಂಡು ಹಾಯಾಗಿರೋದೇ ವಾಸಿ'' ಅಂತ ತಲೆದೂಗಿದ ಮೂರ್ತಿ.

''ಅಂಥ ಒಂದು ಅಪರಂಜಿ ಲೇಬಲ್ ಕಂಡುಹಿಡಿದ ಬ್ಯಾಂಕಿನ ಮಂದಿಗೆ ಭಲೆ ಅನ್ನದಿರೋದಕ್ಕಾಗುತ್ತೆಯೆ!'' ಎಂದು ಪ್ರಾಣೇಶ್ ಮತ್ತೆ ಕೋದಂಡುವಿನ ಅಸೆಟ್ಸ್ ಸಮಾಚಾರ ತೆಗೆದ. ಆ ವಿಚಾರ ನಮಗೆ ಯಾತಕ್ಕೆ ಬಿಡಿ.

★★★



''ಕಾಕರಾಜ, ಕಾಕರಾಜ, ಈ ದೋಸೆ ಕೊಡ್ತೀನಿ, ನೀನು ಹಾಡು ಹೇಳೋದು ನಿಲ್ಲಿಸ್ತೀಯಾ?''

# ಧಾಗಿ ನಕ ನಕ ಧಿನ್.. ಧಾಗಿ..

ಕೇಫ

''ಶೌರೀ...''

ಉತ್ತರವಿಲ್ಲ.

''ಶೌರೀ!''

ಉತ್ತರವಿಲ್ಲ.

''ಶೌರೀ!?''

ಡಿಟೋ-

''ಶೌರೀ!!??'' ನನ್ನ ನರಗಳೆಲ್ಲಾ ಕಿತ್ತು ಬರುವ ಹಾಗೆ ಕಿರುಚಿದೆ.

ಅಡಿಗೆ ಮನೆಯಲ್ಲಿ ಒಂದು ಕಪ್ ಕೆಳಗೆ ಬಿದ್ದು ಚೂರುಚೂರಾದ ಶಬ್ದ ಕೇಳಿಸಿತು.

''ಸರ್'' ಅನ್ನುತ್ತಾ - ಹೊರಗೆ ಬಂದ... ಶೌರಿ ಅಲ್ಲ!

''ಯಾರು ನೀನು?''

''ನಾನು ಸರ್, ಟಿಪ್ಪು - ಅಕಿಲಾಂಡಿ - ಮರೆತುಬಿಟ್ರಾ?''

''ನೀನೇನಿಲ್ಲಿದ್ದಿ? ಶೌರಿ ಎಲ್ಲಿ?'' ಕೇಳಿದೆ.

''ಶೌರಿ ಮಾವ ಊರಿಗೆ ಹೋದ. ನಾನು ಹೆಗ್ಗಡದೇವನ ಕೋಟೆಯಿಂದ ಬೆಳಿಗ್ಗೆ ಬಸ್ಸಿಗೇ ಬಂದೆ'' ಅಂದ.

''ನಾನಷ್ಟು ಬಾರಿ ಕೂಗಿದ್ದು ನಿನಗೆ ಕೇಳಿಸಲಿಲ್ವೆ?''

''ಇಲ್ಲ ಸರ್ - ನಾನು ಬೆಳಗಿನ ಜಾವದ ಬಸ್ ಹತ್ತಿದ್ದು ಕಿವಿಗಳಿಗೆ ಹತ್ತಿ ತುರುಕಿದ್ದೆ. ತೆಗೆದೇ ಇರಲಿಲ್ಲ. ಕಾಫಿ ತರ್ತೀನೆ...'' ಅಂತ ಓಡಿದ.

ಈ ಟಿಪ್ಪು ಉರ್ಫ್ ಅಕಿಲಾಂಡಿ ಯಾರೂಂತ ನಿಮಗೆ ತಿಳಿದಿದೆಯೋ ಇಲ್ವೋ - ಹೇಳ್ತೀನೆ. ನಮ್ಮ ಶೌರಿ ಅಕ್ಕನ ಮಗ. ತಂದೆ ಹೆಗ್ಗಡೆದೇವನ ಕೋಟೆ ಅಖಿಲಾಂಡಯ್ಯ. ಅಪ್ಪ ಮಹಾಪ್ರಾಣ - ಮಗ ಅಲ್ಪಪ್ರಾಣ. ಇವನಿಗೆ ಗಿಣಿ ಮೂಗಿರೋದ್ರಿಂದ ಇವನ ಸಹಪಾಟಿಗಳು ಟಿಪ್ಪು ಅಂತ ನಾಮಕರಣ ಮಾಡಿದರು. ಇವನ ಇನ್ನೊಂದು ಹೆಸರು - ಮುರಳಿ. ಇವನು ಸದಾ ಬಾರಿಸೋ ರಾಗಮಾಲು ವಾದ್ಯಾನ ಕೊಳಲು ಅಂತ ತಿಳ್ಕೊಂಡು ಅವನ ಅಜ್ಜಿ ಇಟ್ಟಿರೋ ಮುದ್ದಿನ ಹೆಸರು. ಶೌರಿ - ರಜಾದಿನಗಳಲ್ಲಿ - ಅವನ ಬದಲಿ ಈ ಟಿಪ್ಪು ನನ್ನ ಸೇವೆಗೆ.

ಟಿಪ್ಪು ಕಾಫಿ ತಂದ.

''ಶೌರಿ ಯಾಕೆ ಹೋಗಿದ್ದಾನೆ ಊರಿಗೆ - ಟಿಪ್ಪು?''

''ನಮ್ಮಪ್ಪ ಬಸ್ ಖಾದರಣ್ಣನ ಹತ್ರ ಕಾಗ್ದ ಕಳ್ಸಿದ್ದರು..''

ಏನೋ ಅರ್ಜೆಂಟ್ ಪರಿಸ್ಥಿತಿ ಅಂತ ಸುಮ್ಮನಾದೆ.

ಸ್ನಾನಾದಿಗಳನ್ನು ತೀರಿಸಿಕೊಂಡು ಬಂದೆ.

''ಕೇಸರಿಭಾತ್ - ಕಾಫಿ ಸರ್'' ಅಂತ ಬೆಳಗ್ಗಿನ ಫಲಹಾರ ತಂದಿಟ್ಟ.

''ಇದೇನಪ್ಪ ಬೆಳಿಗ್ಗೆ - ಸಿಹಿ - ಜೊತೆಗೆ ಕಾಫಿ?''

''ನನಗೆ ಬಾಯಿ ಹುಣ್ಣು ಸರ್ - ಖಾರ ತಿನ್ನೋಕಾಗೊಲ್ಲ. ಶೌರಿ ಮಾವಾನೇ ಹೇಳ್ದ. ಕೇಸ್ರಿಭಾತ್ ಮಾಡ್ಕೊ ಅಂತ'' ಅಂದ.

''ಆದರೆ - ನಂಗೇನೂ ಬಾಯಿಹುಣ್ಣಿಲ್ಲವಲ್ಲಾ...''

''ಕೇಸರಿಭಾತ್ ತಿಂದ್ರೆ ಬಾಯಿಹುಣ್ಣೇ ಬರೊಲ್ಲ ಸರ್..''

ತೆಪ್ಪಗೆ ಕೇಸರಿಬಾತ್ ತಿಂದು - ನೀರು ಕುಡಿದು - ಮೇಲೆ ಕಾಫಿ ಮುಗಿಸಿದೆ.

''ಮಧ್ಯಾಹ್ನ ಊಟಕ್ಕೆ ನನಗಾಗಿ ಕಾಯಬೇಡ ಟಿಪ್ಪು'' ಅಂದೆ.

''ಇಲ್ಲ ಸರ್ - ನಾನು ಯಾವಾಗ್ಲೂ ಸ್ಕೂಲ್ ಟೈಮ್‌ಗೆ ಸರಿಯಾಗಿ ಊಟ ಮಾಡಿಬಿಡ್ತೇನೆ..'' ಅಂದ.

ನಾನು ಮೈಗಳ್ಳರ ಸಂಘಕ್ಕೆ ಹೋಗಿ, ಅಂದಿನ ಲಂಚ್ ಅಲ್ಲೇ ಮುಗಿಸಿ - ನೀಲೀ ಕೋಣೇಲಿ ರೆಸ್ಟ್ ತೆಗೆದುಕೊಂಡು - ಮಧ್ಯಾಹ್ನದ ಟೀ ಸಮಯಕ್ಕೆ ಮನೆ ಸೇರಿದೆ. ತಕ್ಷಣ ವಾಪಸ್ ತಿರುಗಿದೆ - ಇದೇನು ನನ್ನ ಮನೆಯೋ ಅಥವಾ ಪಕ್ಕದ ಮನೆಯೋ ಅಂತ! ಕಾರಣ - ಹಾಲಿನಲ್ಲಿ ಒಂದೇ ರಂಪ! ಹೊರಗೆ ಬಂದು ನೋಡಿದೆ - ನನ್ನದೇ ಮನೆ. ಪುನಃ ಒಳಹೊಕ್ಕೆ. ಹಾಲಿನಲ್ಲಿ ದೊಂಬರಾಟದ ಕೂಟ ನಡೀತಾ ಇದ್ದ ಹಾಗಿತ್ತು. ನಾನು ಬಾಗಿಲಲ್ಲಿ ನಿಂತು ಹಾಗೇ ನೋಡಿದೆ. ಹಾಲಿನ ಮಧ್ಯೆ ಟಿಪ್ಪು ತನ್ನ ರಾಗಮಾಲನ್ನು ಊದುತ್ತಾ ನಿಂತಿದ್ದಾನೆ. ಅವನ ಸುತ್ತ ಕೆಲವು ಹುಡುಗರು - ಚಡ್ಡಿ ಅಂಗಿ ಧರಿಸಿ - ಕುಣೀತಾ ಇದ್ದಾರೆ! ಹಾಗೇ ನಿಂತೆ. ಅವರ್‍ಯಾರಿಗೂ ನಾನು ಕಾಣಿಸಲೇ ಇಲ್ಲವೇನೋ... .

ಟಿಪ್ಪುವಿನ ವಾದ್ಯಕ್ಕೆ ಮೈ ಮರೆತವರಂತೆ ಹೆಜ್ಜೆ ಹಾಕುತ್ತಿದ್ದರು. ನಾನು ನಿಂತೇ ಇದ್ದೆ. ನನಗರಿವಿಲ್ಲದಂತೆಯೇ ನಾನೂ ಹೆಜ್ಜೆ ಹಾಕಲು ಆರಂಭಿಸಿದ್ದೆ. ನನಗೆ ತಿಳಿದ ಹಾಗೆ - ಟಿಪ್ಪೂಗೆ ಅವನ ರಾಗಮಾಲಿನಲ್ಲಿ - ಅಮರಾ ಮಧುರಾ ಪ್ರೇಮ - ಹಾಡೊಂದೇ ಊದೋಕೆ ಬರ್ತಾ ಇದ್ದದ್ದು. ಆದರೆ ಈಗ ಅವನ ವಾದ್ಯದಿಂದ ಒಂದು ರೀತಿ ಬ್ಯಾಂಡ್ ಟ್ಯೂನ್ ಹೊರಬರುತ್ತಿತ್ತು. ಕುಣಿಯೋಕೆ ಅನುಕೂಲವಾಗಿತ್ತು. ಅವರ ಕುಣಿತ ನಿಂತಿತು. ರಾಗಮಾಲು ಶಬ್ದ ನಿಂತಿತು. ನನಗೆ ಎಚ್ಚರವಾಯ್ತು.



''ಟಿಪ್ಪೂ!'' ಅಂದೆ.

''ಸರ್'' ಅನ್ನುತ್ತಾ ತನ್ನ ವಾದ್ಯಾನ ಸೊಂಟದಲ್ಲಿ ಸೇರಿಸಿ ನನ್ನ ಹತ್ತಿರ ಬಂದ.

''ಯಾರಿವರೆಲ್ಲ!''

''ಹೆಗ್ಗಡದೇವನ ಕೋಟೆ ಹುಡುಗರು''

''ಯಾವಾಗ ಬಂದರು?''

''ನನ್ನ ಜೊತೇಲೇ ಬಂದ್ರು...''

''ಏನಿದು ನಿನ್ನ ಕಾರುಬಾರು?'' ಸ್ವಲ್ಪ ಗದರಿ ಕೇಳಿದೆ.

ಟಿಪ್ಪು - ಶೌರಿಯ ಸೋದರಳಿಯ - ಹಾಗೂ ಶಿಷ್ಯ - ಸ್ವಲ್ಪವೂ ಹೆದರಲಿಲ್ಲ.

''ಮುಂದಿನವಾರ ನಮ್ಮೂರಲ್ಲಿ ಜಾತ್ರೆ - ನಾಟ್ಕ - ಡಾನ್ಸ್ ಎಲ್ಲಾ ಇವೆ ಸರ್. ಅದಕ್ಕೇ ಇಲ್ಲಿ ಅಭ್ಯಾಸ ಮಾಡ್ತಿದ್ದಾರೆ''.

''ಆದರೆ...''

''ಊರಲ್ಲಿ ಅಭ್ಯಾಸ ಆಗೊಲ್ಲ ಸರ್ - ತುಂಬಾ ತೊಂದ್ರೆ - ಇಲ್ಲೇ ಮಾಡು ಅಂತ ಶೌರಿ ಮಾವ ಹೇಳ್ದ..''

''ಶೌರಿ ಯಾವಾಗ ವಾಪಾಸ್ಸಾಗ್ತಾನೆ?''

''ನಾನು ಅಲ್ಲಿಗೆ ಹೋದ ತಕ್ಷಣ ಸರ್..''

''ಸರಿ - ಇವರಿಗೆಲ್ಲಿ ಊಟಕ್ಕೇನು ಮಾಡ್ದೆ?''

''ಒಗ್ಗರಣೆ ಅನ್ನ, ಮೊಸರನ್ನ ಮಾಡಿದ್ದೇನೆ - ನಾನು ಸ್ವಲ್ಪ ಸೀಸಜ್ಜಿಗೆ ಮಾಡಿಕೊಂಡೆ ಸರ್..''

''ಸರಿ - ನಾನು ರಾತ್ರೀನೂ ಊಟಕ್ಕೆ ಬರೋಲ್ಲ....''

''ಸರಿ ಸರ್- '' ಅಂದ.

ನಾನು ರಾತ್ರಿ ಇಂದ್ರ ಭವನದಲ್ಲಿ ಊಟಮಾಡಿ ಮನೆ ಸೇರೋ ಹೊತ್ತಿಗೆ - ಮನೆ ಶಾಂತವಾಗಿತ್ತು.

''ನಿನ್ನ ಸ್ನೇಹಿತರೆಲ್ರೂ ಊರಿಗೆ ಹೋದರೇನು?'' ಕೇಳಿದೆ.

''ಇಲ್ಲ ಸರ್ ಕ್ಲಾಕ್‌ಟವರ್ ಹತ್ರ ಸಿನಿಮಾ ನೋಡೋಕೆ ಬಿಟ್ಟು ಬಂದಿದ್ದೇನೆ -

ಆಮೇಲೆ ಕರ್ಕೊಂಡು ಬರ್ತೇನೆ'' ಅಂದೆ.

ನನಗಾಶ್ಚರ್ಯವಾಯ್ತು

''ಯಾವ ಥಿಯೇಟರಲ್ಲಿ!''

''ಥಿಯೇಟರ್ ಗಿಯೋಟರ್ ಯಾವ್ದೂ ಇಲ್ಲ ಸರ್ - ಸಂಜೆ ಆಟೋಲಿ ಕೂಗ್ತಾ ಹೋದ್ರು - ಯಾವ್ದೋ ಮಿತ ಸಂತಾನದ್ದೋ - ಗೊಬ್ಬರದ ಉಪಯೋಗದ್ದೋ ಸಿನಿಮಾ ತೋರಿಸ್ತಾರೇಂತ - ಅದನ್ನೇ ನೋಡ್ಲೀಂತ - ಕರ್ಕೊಂಡು ಹೋಗಿಬಿಟ್ಟೆ..''

ಅರ್ಥವಾಯ್ತು - ಆರೋಗ್ಯ ಇಲಾಖೆಯೋರು - ವ್ಯವಸಾಯ ಇಲಾಖೆಯೋರೂ ತೋರಿಸೋ ಪ್ರಚಾರದ ಸಿನಿಮಾ - ನನಗೆ ಅಯ್ಯೋ ಪಾಪ - ಎನ್ನಿಸಿತು.

''ಪಾಪ - ಹುಡುಗರನ್ನ ಯಾವುದಾದರೂ ಸಿನಿಮಾಕ್ಕೇ ಕಳಿಸಬೋದಿತ್ತು...''

''ಹೌದು ಸರ್ - ನಾಳೆ ರಾತ್ರಿ - ಶೋಲೆ ತೋರಿಸ್ತೇನೆ ಸರ್ - ನಾನು ನೋಡಿಲ್ಲ...'' ಅಂದ.

ರಾತ್ರಿ ಮಲಗೋಕೆ ಮುಂಚೆ ನನಗೆ ಹಾಲು ತಂದುಕೊಟ್ಟ.

''ಏಕೆ ಟಿಪ್ಪು - ಮಾಲ್ಟೋವಾ - ಬೋರ್ನ್‌ವಿಟಾ - ಯಾವ್ದೂ ಇಲ್ವೇ?''

''ಇತ್ತು - ಖರ್ಚಾಗೋಯ್ತು ಸರ್. ಇವರ್‍ಯಾರೂ ಇದುವರ್ಗೂ ಕುಡಿದೇ ಇರ್ಲಿಲ್ಲ - ಒಬ್ಬೊಬ್ರೂ ಎರಡೆರಡು ಲೋಟ ಕುಡಿದು ಬಿಟ್ರು..'' ಅಂದ.

''ವಳ್ಳೇದಾಯ್ತು - ಈ ಹಾಲನ್ನೂ ಅವರಿಗೇ ಹಂಚಿ ಬಿಡು - ಒಂದು ಲೋಟ ನೀರು ತಂದು ಕೊಡು..''

''ಬಿಸಿ ನೀರಾ ಸರ್..?''

''ಅಲ್ಲ - ಫ್ರಿಡ್ಜಿಂದ..'' ಅಂದೆ.

ಮಾರನೇ ದಿನ ಬೆಳಿಗ್ಗೆ ಟಿಪ್ಪು ಕಾಫಿ ತಂದ.

''ಅವರಿಗೆಲ್ಲಾ ಕಾಫಿ ಕೊಟ್ಯಾ ಟಿಪ್ಪು?''

''ಕೊಟ್ಟೆ ಸರ್..''

''ಅವರ ಅಭ್ಯಾಸ ಪೂರ್ತಿ ಇಲ್ಲೇನಾ?''

''ಹೌದು ಸರ್, ಹಾಗೇ ಶೌರಿ ಮಾವ ಹೇಳಿರೋದು. ನಮ್ಮ ಸೆಟ್‌ನಲ್ಲಿ - ರಂಗ - ಸುಬ್ಬ - ಸರಿಯಾಗಿ ಹೆಜ್ಜೆ ಹಾಕ್ತಿಲ್ಲ. ಶೌರಿ ಮಾವನ ದೋಸ್ತೊಬ್ಬರು ಕಲ್ಸೋಕೆ ಬರ್ತಾರೆ ಇವತ್ತಿಂದ''

ನನ್ನ ತಲೆ ಗಿರ್ರೆಂದಿತು. ನನ್ನ ಮನೆ ಒಂದು ನಾಟ್ಯಶಾಲೆ ಆಗ್ಹೋಯ್ತ? - ಎನ್ನಿಸಿತು. ಶೌರಿಯ ಮೇಲೆ ವಿಪರೀತ ಕೋಪ ಬಂತು. ಮೊದಲನೇದಾಗಿ - ನನಗೆ

ತಿಳಿಸದೇ - ಊರಿಗೆ ಹೋಗಿ ಬಿಟ್ಟಿದ್ದು - ಎರಡನೇದು - ಈ ಟಿಪ್ಪೂನ ಆರು ಮಂಗ ಹುಡುಗರೊಂದಿಗೆ ನನ್ನ ಮನೇಲಿ ವಾಸಕ್ಕೆ ಬಿಟ್ಟಿರೋದು - ಮೂರನೇದಾಗಿ - ನನ್ನ ಮನೇನ ಒಂದು ನಾಟ್ಯಶಾಲೆ ಮಾಡಿರೋದು...

''ಟಿಪ್ಪು..!'' ಕರೆದೆ

''ಸರ್..''

''ಈ ದಿನ..''

''ಮಧ್ಯಾಹ್ನ ಈರಣಗೆರೆ ಬದನೇಕಾಯಿ ವಾಂಗೀಭಾತ್ - ಆಲೂಗಡ್ಡೆರಾಯತ ಮಾಡ್ತೇನೆ ಸರ್..''

ವಾಂಗೀಭಾತ್! ನನ್ನ ಫೇವರಿಟ್!

''ಟಿಪ್ಪು ನಿನಗೆ ಬಾಯಿ ಹುಣ್ಣು...''

''ಈಗ ವಾಸಿ ಸರ್.. ಈಗ ಬೆಣ್ಣೆ ದೋಸೆ - ತೆಂಗಿನಕಾಯಿ ಚಟ್ನಿಗೆ ರೆಡಿ ಮಾಡಿದ್ದೇನೆ - ಸ್ನಾನ ಮುಗಿಸಿ ಬನ್ನಿ ಸರ್..'' ಅಂದ.

ನಾನು ತುಸು ಗಂಭೀರವಾಗಿಯೇ ಇದ್ದೆ. ಸ್ನಾನ ಮುಗಿಸಿ ಡ್ರೆಸ್ ಮಾಡಿಕೊಂಡು ಹಾಲಿಗೆ ಬಂದೆ. ಹಾಲಿನಲ್ಲಿ ಸಾಲಾಗಿ ಟಿಪ್ಪು ಸ್ನೇಹಿತರು ಕೂತಿದ್ದರು. ಎಲ್ಲರೂ ನನ್ನನ್ನು ನೋಡಿದ ತಕ್ಷಣ ಎದ್ದು ನಿಂತುಕೊಂಡರು. ಎಲ್ಲರೂ ಟಿಪ್ಪುವಿನ ಸಮವಯಸ್ಕರು - ಸಮ ಸೈಜಿನವರು. ಅವರನ್ನು ನೋಡಿದ ತಕ್ಷಣ ನನ್ನ ಗಾಂಭೀರ್ಯ ಮಾಯವಾಗಿ - ನಗು ಉಕ್ಕಿ ಬಂತು. ಕಷ್ಟದಿಂದ ತಡೆದುಕೊಂಡೆ.

''ತಿಂಡಿ ತಿಂದ್ರೇನ್ರೋ?'' ಕೇಳಿದೆ.

''ಅವರಿಗೂ ಕೊಡ್ತೇನೆ ಸರ್..'' ಅಂದ ಟಿಪ್ಪು.

''ಹ್ಯಾಗೆ ನಡೀತಿದ್ರೋ ನಿಮ್ಮ ಅಭ್ಯಾಸ?'' ಅಂದೆ.

ಎಷ್ಟೇ ಆಗಲಿ - ಅವರು ನನ್ನ ಅತಿಥಿಗಳು.

''ಪರವಾಗಿಲ್ಲ ಸರ್ - ಇನ್ನೊಂದು ವಾರದಲ್ಲಿ - ಪಕ್ಕಾ ಆಗ್ಬಿಡ್ತಾರೆ - ಇವತ್ನಿಂದ - ತಿಪ್ಪಣ್ಣ ಅನ್ನೋರು ಬರ್ತಾರಂತೆ ಹೇಳಿ ಕೊಡೋಕೆ - '' ಅಂದ ಒಬ್ಬ - ಪ್ರಾಯಶಃ ಪ್ರೈಮರೀ ಓದಿ ಮುಗಿಸಿರಬೇಕು.

ತಿಪ್ಪಣ್ಣ.. ಒಂದು ಆರ್ಕೆಸ್ಟ್ರಾ ನಡೆಸ್ತಾನೇಂತ ಶೌರಿ ಒಂದು ಬಾರಿ ನನಗೆ ಹೇಳಿದ್ದ ಜ್ಞಾಪ್ಕ. ಈ ಹುಡುಗನ ಮಾತು ಕೇಳಿದರೆ - ಈ ಪಟಾಲಂ ಒಂದು ವಾರ ಇಲ್ಲೇ - ಶೌರಿ ಹೆಗ್ಗಡದೇವನ ಕೋಟೆಯಲ್ಲೇ - ಅಂದ ಹಾಗಾಯ್ತು! ಇದೆಲ್ಲಾ ಶೌರೀದೇ ಕಿತಾಪತಿ - ಅಂತಲೂ ಸಂಶಯವಾಯ್ತು. ಫಲಹಾರ ಮುಗಿಸಿ ರೂಮು ಹೊಕ್ಕೆ. ಲ್ಯಾನ್ಸ್ ಡೌನ್ ಬಜಾರ್ ಕಡೆ ಹೋಗೋಕೆ ರೆಡಿಯಾಗಿ - ಹೊರಗೆ ಬಂದೆ. ಹಾಲಿನಲ್ಲಿ - ಟಿಪ್ಪು ಮತ್ತು ಸಂಗಡಿಗರ ಅಭ್ಯಾಸ ಶುರುವಾಗಿತ್ತು. ಕುತೂಹಲದಿಂದ

ಕೋಣೆಯ ಬಾಗಿಲಲ್ಲಿ ಹಾಗೇ ನಿಂತೆ. ಅವರ ತಾಳಕ್ಕೆ ನನ್ನ ಕಾಲುಗಳು ಹೆಜ್ಜೆ ಹಾಕಲು ಶುರು ಮಾಡಿದವು. ಹಾಗೇ ಹಾಲಿನಲ್ಲಿ ಸೋಫಾ ಮೇಲೆ ಕುಳಿತೆ.

''ಸ್ಟಾಪ್...'' ಅಂದೆ.

ಎಲ್ಲರೂ ನಿಂತರು.

''ಆ ಮೂರನೇ ಹುಡುಗನ ಹೆಜ್ಜೆ ಸರಿಯಾಗಿಲ್ಲ..'' ಅಂದೆ.

ಟಿಪ್ಪು ನೋಡಿದ.

''ಅವನೇ ಸರ್ ರಂಗ ಅವನೂ.. ಆ ಕಡೇ ಹುಡುಗ - ಸುಬ್ಬು - ಇಬ್ಬರಿಗೂ ಸರಿಯಾಗಿ ಕೂಡ್ತಾ ಇಲ್ಲ...'' ಅಂದ.

ನನ್ನ ಕುತೂಹಲ ಇನ್ನೂ ಬೇರೂರಿತ್ತು.

''ಯಾಕೆ ಕೂಡೊಲ್ಲ ನೋಡಿ ಬಿಡ್ತೇನೆ - ನಿನ್ನ ರಾಗಮಾಲಿನಲ್ಲಿ ಬ್ಯಾಂಡ್ ಬಾರಿಸು - ನಾನು ತಾಳ ಹಾಕ್ತೇನೆ - ಅವರು ಕುಣೀಲಿ...'' ಅಂತ ಕೈರೆಡಿ ಮಾಡಿಕೊಂಡೆ.

ಟಿಪ್ಪು ಶುರು ಮಾಡಿದ.

ನಾನು ಕೈಗಳಿಂದ ತಾಳ ಹಾಕಿ - ಕುಣಿತ ಶುರು ಮಾಡಿಸಿದೆ - ಒಂದು-ಎರಡು-ಮೂರು-ಫಟ್! ಒಂದು-ಎರಡು-ಮೂರು-ಫಟ್! - ಸೋ ಆನ್ - ಈ ರೀತಿ.. ಐದಾರು ಸುತ್ತು ಆಯ್ತು..

''ಟಿಪ್ಪು!''

''ಸರ್..''

''ಖಾಲಿ ಕೈಯಿಂದ ತಾಳ ಹಾಕೋಕಿಂತ - ಒಂದು ಕಂಜರಿ ಇದ್ದಿದ್ರೆ ಚೆನ್ನಾಗಿರುತ್ತೆ..'' ಅಂದೆ.

''ನಾನೂ ಅದೇ ಹೇಳ್ಬೇಕೂಂತಿದ್ದೆ...'' ಅಂದ.

ಕಳೆದ ರಾಮನವಮಿ ಉತ್ಸವ ಕಾಲದಲ್ಲಿ ರಾಮ ಮಂದಿರದ ಒಂದು ಕಛೇರಿಯಲ್ಲಿ ವಿದ್ವಾನ್ ಎಚ್.ವಿ. ರಾಮಾಚಾರ್ರು ಕಂಜರ ಬಾರಿಸೋದು ನೋಡಿ - ಆಲಿಸಿ - ನನಗೆ ಕಂಜರದ ಮೇಲೆ ತುಂಬಾ ಆಸೆ ಹುಟ್ಟಿಬಿಟ್ಟಿತು. ಆ ಕಚೇರಿಯಲ್ಲಿ ಮೃದಂಗ ವಿದ್ವಾನ್ - ತನ್ನ ಎರಡೂ ಕೈಗಳಿಂದ ಬಾರಿಸಿದ್ದನ್ನೆಲ್ಲಾ ರಾಮಾಚಾರ್ರು ಒಂದೇ ಕೈನನ ಐದೇ ಬೆರಳುಗಳಿಂದ ಬಾರಿಸಿದ್ದರು. ಹಿಂದೆ ಒಂದು ಬಾರಿ ಮಂಜುನಾಥ್ ಘಟ ಬಾರಿಸಿದ್ದು ನೋಡಿ ನಾನೂ ಒಂದು ಘಟ ತಂದುಕೊಂಡೆ. ನಾನು ಅದರ ಮೇಲೆ ಕೈ ಆಡಿಸಿದಾಗಲೆಲ್ಲಾ ಶೌರಿ ಸೂತಕ ಅಂಟಿಸಿಕೊಂಡೋರ ಹಾಗೆ ಆಡ್ತಿದ್ದ. ಒಂದು ದಿನ ಘಟದಲ್ಲಿ ನೀರು ತುಂಬಿಯೂ ಇಟ್ಟುಬಿಟ್ಟ. ಆದರೆ ಈಗ - ಸದ್ಯ ಶೌರಿ ಇರಲಿಲ್ಲ.

ಕಂಜರ ತರೋಕೆ ಕಾರಣವೂ ಇತ್ತು.

''ಒಂದು ಕಂಜರಿ ತಂದು ಬಿಡೋಣ ಟಿಪ್ಪು..'' ಅಂದೆ.

''ಸಯ್ಯಾಜಿ ರಸ್ತೇಲಿ ಕಂಜರ ಸಿಗುತ್ತೆ ಸರ್ - ಇಪ್ಪತ್ತು ರೂಪಾಯಿಂದ ನೂರೈವತ್ತು ರೂಪಾಯಿನವರ್ಗೂ ಬೆಲೆ..''

''ನಿಂಗೆ ಹ್ಯಾಗ್ಗೊತ್ತು?''

''ನಮ್ಮಪ್ಪ ಊರಲ್ಲಿ ನಾಟ್ಕಕ್ಕೋಸ್ರ ತಂದಿದಾನೆ..''

''ಅದನ್ನ ಬಾರಿಸೋರು ಯಾರು?....ಯಾರೋ ಡ್ಯಾನ್ಸ್ ಮಾಸ್ಟರು - ತಿಪ್ಪಣ್ಣ....ಬಾರಿಸ್ತಾನಾ?''

''ಕಂಜರಾನ ಯಾರು ಬೇಕಾದ್ರೂ ಬಾರಿಸ್ಬೋದು ಸರ್ - ನಮಗೆ ತಿಪ್ಪಣ್ಣ ಗಿಪ್ಪಣ್ಣ ಯಾರೂ ಬೇಕಾಗೇ ಇಲ್ಲ - ನೀವೇ ನಮಗೆ ಡ್ಯಾನ್ಸ್ ಮಾಸ್ಟರ್ ಆಗಿ ಸರ್..'' ಅಂದ.

ನನಗೆ ನಿಜವಾಗಿ ಹೆಮ್ಮೆ ಬಂತು. ನನ್ನ ಎತ್ತರ ಒಂದು ಡನ್‌ಹಿಲ್ ಸಿಗರೇಟ್‌ನಷ್ಟಾದ್ರೂ ಹೆಚ್ಚಿದಂತೆ ಆಯ್ತು. ಸರಿ ಮಧ್ಯಾಹ್ನ ಊಟ ಮಾಡಿ ಸ್ವಲ್ಪ ರೆಸ್ಟ್ ತೆಗೆದುಕೊಂಡ ಮೇಲೆ ಪುನಃ ಹುಡುಗರ ತಾಲೀಮ್ ಶುರು ಮಾಡಿಸಿ ಬಿಡೋಣ ಅಂತ - ಟಿಪ್ಪು ಹತ್ರ ನೂರ್‍ರೂಪಾಯಿ ಕೊಟ್ಟು - ಒಂದು ಕಂಜರ ತಂದಿಡು - ಅಂತ ಹೇಳಿದೆ. ಊಟಕ್ಕೆ ಮುಂಚೆ ಒಂದು ರೌಂಡ್ ಸಂಘದಕಡೆ ಹೊರಟೆ. ದಾರೀಲಿ ನನಗೆ ಬಾಬು ಜ್ಞಾಪ್ಕ ಬಂತು. ಬಾಬು-ಉರುಫ್-ಸ್ಯೆಯದ್ ಖಲಂದರ್. ನನ್ನ ಆಪ್ತ ಸ್ನೇಹಿತ - ಫ್ಯಾನ್ಸಿ ಸ್ಟೋರ್ ಮಾಲೀಕ. ಅವನ ಮೂಲ್ಕ - ಫಕೀರರು ರಂಜಾನ್ ದಿನಗಳಲ್ಲಿ ಬೆಳಗಿನ ಝಾವ ಸಮಯದಲ್ಲಿ ಬಾರಿಸೋ ದೊಡ್ಡ ದೊಡ್ಡ ಕಂಜರಗಳ ಪಟ್ಟುಗಳನ್ನು - ಅವರಿಂದ ಕಲೀಬೋದು ಅನ್ನಿಸಿತು. ಬಾಬೂನ ನೋಡಿ ನನ್ನ ಆಸೆ ತಿಳಿಸಿದೆ.

''ಅರೆಗುಲ್ಡೂ - ನಿಂಗ್ಯಾಕೋ ಅದೀಗ?'' ಕೇಳಿದ

ಪುನಃ ಎಲ್ಲಾ ವಿಚಾರ ತಿಳ್ಸಿದೆ.

''ಓಹೋ - ಹುಡುಗ್ರು ನಿಂಗೆ ಹುಚ್ಚೂ ಹಿಡಿಸಿದ್ರು - ಶೌರಿ ಸಾಬೇಬ್ನೂ ಇಲ್ಲಾ ಅನ್ನು! ಸರಿ - ಇಲ್ನೋಡು ಪಾಂಡು.. ನಾನು ತಬಲಾ ಕಲೀತಿದ್ದೆ - ಫೇಟ್ ಅಲ್ಲಾರಖಾ ಆಗ್ಬೇಕೂಂತ. ಅದರ ಕತೆ ಈಗ್ಬೇಡ - ನನಗೆ ಒಂದು ತಾಳ ಗೊತ್ತದೆ - ನೋಡ್ಕೋ ನನ್ನ ಕೈನ - ನಿನ್ನ ಕಂಜಿರದ ಮೇಲೆ ಈ ರೀತಿ - ಧಾಗಿನಕ - ನಕ - ಧಿನ್ - ಧಾಗಿನಕ - ನಕ - ಧಿನ್ - ಅಂತ ಬಾರಿಸು - ನಿನ್ನ ತಾಳಕ್ಕೆ ಹುಡುಗರೇನು - ಹೆಲೆನ್ ಕೂಡ ಕುಣೀತಾಳೆ..'' ಅಂದ.

ನನಗೆ ಇದಕ್ಕಿಂತಲೂ ಹೆಚ್ಚು ತಯಾರಿ ಬೇಕಾಗಿರಲಿಲ್ಲ. ಮನೆಗೆ ಬಂದೆ - ಸೋಫಾ ಮೇಲೆ ಕಂಜರ ಕೂತಿತ್ತು.

''ಟಿಪ್ಪು..''

''ಸರ್..'' ಅನ್ನುತ್ತಾ ಸೌಟು ಹಿಡಿದುಕೊಂಡು ಹೊರಕ್ಕೆ ಬಂದ. ಅಡುಗೆ ವಾಸನೆ ಘಮ ಘಮ ಅಂತ ಬರ್‍ತಿತ್ತು.

''ಕಂಜರ ತಂದೆ - ತೊಂಭತ್ತೆಂಟು ರೂಪಾಯಿ - ಎರಡು ರೂಪಾಯಿ ಕಂಜರದೊಳಗೇ ಸಿಕ್ಕಿದ್ದೇನೆ - ತಿಪ್ಪಣ್ಣ ಸಿಕ್ಕಿದ್ರು - ತುಂಬಾ ಸಂತೋಷ ಪಟ್ರು - ಅವರು ಬರೋಲ್ಲವಂತೆ - ನಾನು ಬಿಸೀ - ಅಂದ್ರು..''

''ಹುಡುಗರೆಲ್ಲಿ?''

''ಖಾಸ್ ಬಂಗ್ಲೇಗೆ ಕಳ್ಸಿದ್ದೇನೆ - ಊಟಕ್ಕೆ ಬಂದುಬಿಡ್ತಾರೆ - ತಾಳ ಮರೆಯೋದ್ರೊಳಗಾಗಿ ಬೆರಳುಗಳನ್ನ ಕಂಜರದ ಮೇಲೆ ಆಡಿಸಿ ಬಿಡಿ ಸರ್..'' ಅಂದ.

ನನಗೇ ಅರಿವಿರಲಿಲ್ಲ - ಬಾಬು ಹೇಳಿಕೊಟ್ಟಿದ್ದು ಧಾಗಿನ-ನಕ-ಧಿನ್ ತಾಳಾನ ನನ್ನ ಬಲಗೈ ಬೆರಳುಗಳಿಂದ ಬಾರಿಸಿಕೊಂಡೇ ಇದ್ದೆ. ಟಿಪ್ಪು ಹತ್ತಿರ ಮಾತಾಡುತ್ತಿದ್ದಾಗ್ಲೂ ಬೆರಳುಗಳು ಅದನ್ನ ಬಾರಿಸ್ತಾನೇ ಇದ್ವು. ಅದನ್ನು ನೋಡೇ ಟಿಪ್ಪು ಆ ರೀತಿ ಹೇಳಿದ್ದ. ನಾನು ತಕ್ಷಣ ಕಂಜಿರಾನ ಎಡಗೈನಲ್ಲಿ ಎತ್ತಿಕೊಂಡು - ರೂಮು ಸೇರಿ - ಕಾಲುಗಳಿಂದ ಬಾಗಿಲನ್ನು ಮುಚ್ಚಿ - ಮಂಚದ ಮೇಲೆ ಕೂತು - ಬಾಬು ಹೇಳಿಕೊಟ್ಟಿದ್ದ ರೀತೀಲಿ ಬೆರಳುಗಳಿಂದ ಕಂಜರದ ಮೇಲೆ ಪ್ರಯೋಗಿಸಿದೆ - ಬಿಲ್‌ಖಿಲ್ - ಧಾಗಿನಕ-ನಕ-ಧಿನ್! ಆ ಸಮಯದಲ್ಲಿ ನನ್ನನ್ನ ಎಚ್.ಪಿ. ರಾಮಾಚಾರ್ ನೋಡಿದ್ದಿದ್ರೆ - ತಕ್ಷಣ ನನ್ನ ಬೆನ್ನ ಮೇಲೆ ಷಹಭಾಸ್ ಅಂತ - ಧಾಗಿನಕ-ನಕ-ಧಿನ್ - ಬಾರಿಸಿರೋರು! ನನ್ನ ಕಂಜಿರದ ಧಾಗಿನಕ-ನಕ-ಧಿನ್‌ಗೆ ನಾನೇ ಎರಡು ಹೆಜ್ಜೆ ಹಾಕಿದೆ. ಅದೇ ಸಮಯದಲ್ಲಿ - ಉದಯಶಂಕರ್ ಅವರ ತಾಂಡವನೃತ್ಯದ ಸ್ಟ್ಯಾಂಪ್ ಕೂಡಾ ಬಂದಿತ್ತು. ಅದೂ ನನಗೆ ಹುರುಪು ಕೊಟ್ಟಿತ್ತು. ಮೋಸ್ಟ್ ಇಂಪಾರ್ಟೆಂಟ್ - ಶೌರಿ ಇರಲಿಲ್ಲ ನನ್ನ ಮೇಲೆ ಥಂಡಾ ಪಾನೀ ಎರಚೋಕೆ.

ಆ ದಿನ ಮಧ್ಯಾಹ್ನ ನಮ್ಮ ಅಭ್ಯಾಸ ಸುಮಾರಾಗಿ ನಡೀತು. ಮಧ್ಯಾಹ್ನದ ಷೋ ಶೋಲೇ ಪಿಕ್ಚರ್‌ಗೆ ಈ ಪಟಾಲಂನ ಕಳ್ಸಿ ರಾತ್ರಿ ಊಟವಾದ ಮೇಲೆ ಪುನಃ ಅಭ್ಯಾಸ ಮಾಡಿದೆವು. ಮಾರನೇದಿನ ಅನಿರೀಕ್ಷಿತವಾಗಿ ಬಾಬು ತಮ್ಮ ಶಬ್ಬೀರ್ ಬಂದ. ಮಮ್ತಾಜ್ ಅಲಿ ಕುಣಿತಿದ್ದ ಮೂರು ತರಹ ಸ್ಟೆಪ್ಸ್ - ತನ್ನ ಕಾಲುಗಳಿಗೆ ಗೆಜ್ಜೆ ಕಟ್ಕೊಂಡು ತೋರಿಸಿಕೊಟ್ಟ - ಎಲ್ಲಕ್ಕೂ ಸಧ್ಯ - ಧಾಗಿನಕ-ನಕ-ಧಿನ್ - ಒಂದೇ ತಾಳ. ಬೇರೆ ಬೇರೆ ಸ್ಟೆಪ್ಸ್ ಅಷ್ಟೇ. ಟಿಪ್ಪು ಶಬ್ಬೀರ್ ಜೊತೆ ಹೋಗಿ - ಏಳು ಜೊತೆ ಗೆಜ್ಜೆಗಳನ್ನು ತಂದ - ತನಗೆ ಮತ್ತು ಆರು ಹುಡುಗರಿಗೆ. ನನ್ನ ಮುಖ ನೋಡ್ತಾ ತನ್ನ ಜೇಬಿಂದ ಇನ್ನೊಂದು ಜೊತೆ - ಎಂಟನೇದು - ನನ್ನ ಮುಂದೆ ಇಟ್ಟ. ಒಂದು

ಕಂಜಿರದ ಧಾಗಿನಕ-ನಕ-ಧಿನ್ ತಾಳಕ್ಕೆ ಎಂಟು ಜೊತೆ ಗೆಜ್ಜೆ ಕಾಲುಗಳು ಅಭ್ಯಾಸ ಮುಂದುವರಿಸಿದವು. ಐದನೇ ದಿನ- ಟಿಪ್ಪು ಖಯಾಲ್ ಹೈದಾ ಕಣೋ - ನನ್ನನ್ನ ತಬಲಾ ಜೊತೆ ಬಾ ಅಂತ ಕರ್ಕೊಂಡು ಬಂದ - ಅಂತ ಹೇಳ್ಕೋತಾ ಬಾಬು - ತಬಲಾ ಸಹಿತ ಬಂದ. ಆ ದಿನ ನಮ್ಮ ಡ್ಯಾನ್ಸ್ ಫರ್‌ಫೆಕ್ಟ್ ಶಿಖರ ಮುಟ್ಟಿತು. ರಾಜ್‌ಕಪೂರ್ ನೋಡಿದ್ದಿದ್ರೆ ನಮ್ಮ ಗ್ರೂಪ್ ಡ್ಯಾನ್ಸ್‌ನ ವಿತ್ ನನ್ನ ಕಂಜಿರ ಪ್ಲಸ್ ಬಾಬೂ ತಬಲಾ - ತನ್ನ ಮುಂದಿನ ಪಿಕ್ಚರ್‌ನಲ್ಲಿ ಸೇರಿಸಿಬಿಟ್ಟಿರೋನು! ಮೂರು ದಿನಗಳ ಸತತ ಅಭ್ಯಾಸದಿಂದ ನಮ್ಮ ಡ್ಯಾನ್ಸ್ ಪಕ್ಕಾ ಆಯ್ತು.

ಸೋಮವಾರ ಹೆಗ್ಗಡದೇವನ ಕೋಟೇಲಿ ಜಾತ್ರೆ. ಶುಕ್ರವಾರ-ಶನಿವಾರ ಸತತ ಅಭ್ಯಾಸ ಮಾಡಿದೆವು. ನಾನೂ ಗೆಜ್ಜೆ ಸುತ್ತುಗಳನ್ನ ಕಟ್ಟಿಕೊಳ್ಳಲೇಬೇಕು - ಆಗಲೇ ನನಗೆ ಕಂಜಿರದ ಪಕಡ್‌ಸಿಕ್ಕೋದು - ಅಂತ ಬಾಬು - ನನಗೂ ಗೆಜ್ಜೆ ಪೂಜೆ ಮಾಡಿಸಿದ್ದ. ಕಂಜಿರ ತಬಲಗಳ ಪೆಟ್ಟಿಗೆ - ನನ್ನ ಗೆಜ್ಜೆಯ ಕಾಲುಗಳು ಹೆಜ್ಜೆ ಹಾಕ್ತಾ ಹುಡುಗರಿಗೆ ತಾಲೀಮ್ ಮಾಡಿಸ್ತಿದ್ದಾಗ - ನಾನೇ ನಾಟ್ಯಾಚಾರ್ಯ ಯು.ಎಸ್. ಕೃಷ್ಣರಾಯರೋ - ಅನ್ನೋ ಭ್ರಮೆ ನನಗೆ!

''ಸ್ಪ್ಲೆಂಡಿಡ್ ಪಾಂಡು!'' ಅಂದ ಬಾಬು.

ಭಾನುವಾರ ಮಧ್ಯಾಹ್ನ ಹುಡುಗರೆಲ್ಲಾ ಹೆಗ್ಗಡದೇವನ ಕೋಟೆಗೆ ಡೋಂಟ್ ಫಿಕರ್ ಬಸ್ ಹತ್ತಿ ಪ್ರಯಾಣ ಮಾಡಿದರು. ರಾತ್ರಿ - ಟಿಪ್ಪು ಹೊರಡೋಕೆ ರೆಡಿಯಾಗಿದ್ದ. ಒಂದು ವಾರ ಮನೆಯಲ್ಲಿ ಧಾಂ ಧಾಂ - ನಡೆದು, ಈಗ ಇದ್ದಕ್ಕಿದ್ದ ಹಾಗೆ ಬಿಕೋ ಅನ್ನುವಂತೆ -ಕಂಡಿತು. ನನ್ನ ಮನಸ್ಸಿನಲ್ಲಿ ಇನ್ನೊಂದು ಭಯ - ನನ್ನ ಶಿಷ್ಯಂದಿರು ಜಾತ್ರೆ ದಿನ ಸ್ಟೇಜಿನ ಮೇಲೆ ಏನು ಅಭ್ಯಾಸ ಮಾಡಿಬಿಡ್ತಾರೋ ಅಂತ! ಹಾಗೇನಾದರೂ ಆದರೆ - ಅದು ಗುರುವಾದ ನನ್ನ ಸೋಲು - ಎನ್ನಿಸಿತು. ಮಧ್ಯಾಹ್ನದ ಊಟದ ನಂತರ ಸ್ವಲ್ಪ ನಿದ್ರೆ ತೆಗೆದು - ಕಂಜಿರ ಕೈಗೆತ್ತಿಕೊಂಡೆ. ಟಿಪ್ಪು - ಟೀ ತಂದ.

''ಟಿಪ್ಪು..''

''ಸರ್..''

''ನೀನು ನಾಳೆ ಮೊದಲ್ನೆ ಬಸ್‌ಗೇ ಹೋಗ್ತೀಯಾ?''

''ಹೌದು ಸರ್ ರಾತ್ರಿ ತುಂಬಾ ಲೇಟಾಗುತ್ತೆ..''

''ನಾಳೆ ರಾತ್ರಿ - ಜಾತ್ರೇಲಿ ಈ ಹುಡುಗರು ಸರಿಯಾಗಿ ಮಾಡ್ತಾರೇಂತ ನಿಂಗೆ ಧೈರ್ಯ ಇದೆಯಾ?''

''ನೀವೂ ಬಂದ್ರೆ ಮಝಾ ಇರುತ್ತೆ ಸರ್, ಹುಡುಗರೂ ಖುಷಿ ಪಡ್ತಾರೆ, ಚೆನ್ನಾಗಿ ಮಾಡ್ತಾರೆ ಸರ್...''

ಇದಕ್ಕೆ ನಾನು ಬಿಲ್‌ಖುಲ್ ಒಪ್ಪಲಿಲ್ಲ.

''ಇಲ್ಲ ಟಿಪ್ಪು - ನಾನು ಸುತರಾಂ ಜಾತ್ರೇಲಿ ಸೇರೋಲ್ಲ..''

''ನೀವು ಬಂದ್ರೆ ಬಾಬೂನೂ ತಬಲಾ ಜೊತೆ ಬರ್‍ತಾರಂತೆ''

''ಬಾಬೂ ಬೇಕಾದ್ರೆ ಬರಲಿ - ಕರ್ಕೊಂಡು ಹೋಗು..'' ಅಂದೆ.

ಸೋಮವಾರ - ಬೆಳಿಗ್ಗೆ ಕಾಫಿ ತಿಂಡಿ ಮುಗಿಸಿ - ರಾಹುಕಾಲ ಕಳೆದ ಮೇಲೆ - ನಾನು ಬಾಬು ಟಿಪ್ಪು - ಕಂಜಿರ-ತಬಲಾ-ರಾಗಮಾಲು-ಎರಡು ಜೊತೆ ಗೆಜ್ಜೆ ಸುತ್ತುಗಳು - ನನ್ನ ಓಪೆಲ್‌ನಲ್ಲಿ ಹೆಗ್ಗಡದೇವನ ಕೋಟೆಗೆ ಪ್ರಯಾಣ ಮಾಡಿದೆವು. ಅರ್ಧ ದಾರಿ ಬಂದಿದ್ದೇನೆ - ಬ್ರೇಕ್ ಹಾಕಿ ಕಾರ್ ನಿಲ್ಲಿಸಿದೆ.

''ಟಿಪ್ಪು!'' ಅಂದೆ

''ಸರ್..''

''ಬಾಬೂನ ನಿನ್ನ ಹೆಗ್ಗಡದೇವನ ಕೋಟೇಲಿ ಬಿಟ್ಟು ನಾನು ತಕ್ಷಣ ನಗರಕ್ಕೆ ವಾಪ್ಸು ಬಂದು ಬಿಡ್ತೇನೆ..'' ಅಂದೆ.

''ಲೋ ಗುಲ್ಡಾಮಿಯಾ - ಏನು ಬಂತೋ ನಿಂಗೆ? ಹೆದರಬೇಡ್ವೋ - ನಿಂಗೆ ಧೈರ್ಯ ಕೊಡೋಕೆ ಬ್ಲಾಕ್‌ನೈಟ್ ಅರ್ಧ ಬಾಟ್ಲಿ ತಂದಿದ್ದೇನೆ..'' ಅಂದ ಬಾಬು.

ನಾನು ಸುಮ್ಮನಿದ್ದೆ.

''ಸ್ಟಾರ್ಟ್!'' ಅಂತ ಕಿರ್‍ಲಿದ ಬಾಬು.

ನಾನು ಕಾರ್ ಪುನಃ ಸ್ಟಾರ್ಟ್ ಮಾಡಿದೆ.

''ಆದರೆ ಒಂದು ಷರತ್ತು - ನಮ್ಮ ಷೋಮುಗಿಯೋವರ್‍ಗೂ - ಶೌರಿಯ ಕಣ್ಣಿಗೆ ನಾನು ಬೀಳಕೂಡದು..'' ಅಂದೆ.

''ಶೌರಿ ಮಾವ ನಮಗೆ ಸಿಕ್ಕೋದೇ ಇಲ್ಲ'' ಅಂದ ಟಿಪ್ಪು.

''ಈ ಷೋ ನಡೆಯೋದೆಲ್ಲಿ?''

''ಚಪ್ರ ಹಾಕಿದ್ದಾರೆ - ಸ್ಟೇಜು ಮೇಕಪ್ - ಎಲ್ಲಾ ಇರ್ತದೆ''.

''ನಾವಿಳ್ಕೊಳೋದು?''

''ಇಸ್ಕೂಲು - ಊರ ಹೊರಗೆ - ಶೌರಿ ಮಾವ - ದೇವಸ್ಥಾನದ ಹತ್ರ - ಊಟದ ಏರ್ಪಾಡ್‌ನಲ್ಲಿರ್ತಾನೆ..''

ಮೇಕಪ್! ನನಗೆ ಷಾಕ್ ಹೊಡೆದಹಾಗಾಯ್ತು.

''ನಾನು ವೇಷಗೀಷ ಹಾಕೊಳೊಲ್ಲ!''

''ನಿಮಗ್ಯಾರು ಸರ್ ವೇಷ ಹಾಕ್ತಾರೆ?''

ಬಾಬೂಗೆ ವಿಪರೀತ ಕೋಪ ಬಂದಿರಬೇಕು.

''ಲೋ ಡಫರ್ - ಕಾರ್ ಮುಂದಕ್ಕೆ ಬಿಡ್ತಿಯೋ ಇಲ್ಲೋ? ನೀ ಹಿಂಗೇ ನಿಂತ್ರೆ ನಾನಿಳಿದು ಟೈರು ಪಂಚರ್ ಮಾಡಿಬಿಡ್ತೇನೆ!'' ಅಂದ

ಹೆಗ್ಗಡದೇವನ ಕೋಟೆ ತಲ್ಪಿದೆವು. ಸ್ಕೂಲಿನ ಹತ್ತಿರ ಕಾರ್ ನಿಲ್ಲಿಸಿದೆ. ಒಂದು ರೂಮಿನಲ್ಲಿ ನಾನು ಬಾಬು - ನಮ್ಮ ಲಗ್ಗೇಜ್ ಸಮೇತ ತಂಗಿದೆವು. ಟಿಪ್ಪು - ನಾವಿದ್ದಲ್ಲಿಗೇ ಕಾಫಿ-ಊಟ ತರಿಸಿದ. ಎಲ್ಲಾ ಅವನ ತಂದೆ ಅಖಿಲಾಂಡಯ್ಯ ಕಟ್ಟಿದ್ದು - ಅಂದ. ಆಮೇಲೆ ಅವರೇ ಬಂದು ಭೇಟಿ ಮಾಡ್ತಾರೆ - ಅಂದ. ಬಾಬೂ - ತಬಲಾ ಮೇಲೆ ಕೈಯಾಡಿಸಿದ. ನಾನು ನನ್ನ ಕಂಜಿರಾ ಸಾಥಿ ಕೊಟ್ಟೆ.

''ಪಾಂಡು ಏನೇ ಆಗಲಿ - ಫಂಕ್ ಆಗ್ಬೇಡ. ಸ್ವಲ್ಪ ತಕೋ..'' ಅಂತ ತಾನು ತಂದಿದ್ದ ಬ್ಲಾಕ್‌ನೈಟ್ ಬಾಟ್ಲು ಕ್ಯಾಪ್ ತೆಗೆದ. ಎಂಟು ಹತ್ತು ಸಿಪ್ಸ್ - ನನ್ನ ದೇಹದಲ್ಲಿ ಉದಯಶಂಕರ್ ಆವಾಹನೆಯಾದ ಹಾಗಾಯ್ತು.

ಹೊರಗೆ ಕತ್ತಲಾಯ್ತು.

''ಸರ್ ಹೊರಡೋಣ..'' ಅಂದ ಟಿಪ್ಪು.

ಹೊರಗೆ ಕತ್ತಲಾಗಿತ್ತು. ಊರಿನ ಜಾತ್ರೆ ದೀಪಗಳು ಮತ್ತು ಕೂಗಾಟ ಗಲಾಟೆಗಳ ಮಧ್ಯೆ ನಾನು ಬಾಬು- ಚಪ್ರದ ಹಿಂಭಾಗದಿಂದ - ಹಿಂದಾಗಡೆ ಬಾಬು ಭಾಷೆಯಲ್ಲಿ - ಹಿಂಭಾಗದಿಂದ ಟಿಪ್ಪು ನಾಯಕತ್ವದಲ್ಲಿ ಗ್ರೀನ್‌ರೂಮ್ ಸೇರಿದೆವು. ಅಲ್ಲಿ ನನ್ನ ಜಂಘಾಬಲವೇ ಬಿಟ್ಟು ಹೋಯ್ತು. ನನಗೆ ನಿಜವಾಗಿ ಜಂಘಾಬಲ ಅಂದರೆ ಏನು ಗೊತ್ತಿಲ್ಲ - ಆದರೆ ನನ್ನ ಚಿಕ್ಕಪ್ಪ ವಿಷಕಂಠರಾಯರು ಆಗಾಗ ಅವರ ಶತ್ರುಗಳ ಜಂಘಾಬಲ ಬಿಡಿಸಿ ಬಿಡ್ತೇನೆ! - ಅಂತ ಹೇಳ್ತಾ ಇರ್ತಾರೆ. ಭಲೋವರ್ಡು - ಜಂಘಾಬಲ! ಆ ಗ್ರೀನ್ ರೂಮಿನಲ್ಲಿ ಆಕಡೆ ರಾಮ-ಆಂಜನೇಯ - ಈ ಕಡೆ ಕೃಷ್ಣ-ಮಕರಂದ-ಗೋಪಿಯರು - ಅವರ ನಡುವೆ ರಾಕ್ಷಸರು- ಮಧ್ಯೆ ನಮ್ಮ ಟಿಪ್ಪು ಪಟಾಲಮ್!

''ನಮಸ್ಕಾರ ಸಾರ್..'' ನನ್ನ ಶಿಷ್ಯರೆಲ್ಲಾ ಒಂದೇ ಬಾರಿ ನನಗೆ ನಮಸ್ಕಾರ ಮಾಡಿದರು. ಅದರ ಸುಖ ಅನುಭವಿಸುವ ಮನಸ್ಸು ನನ್ನಲ್ಲಿರಲಿಲ್ಲ. ಹುಡುಗರೆಲ್ಲಾ ಕಚ್ಚೆ ಪಂಚೆ ಉಟ್ಟು, ಕೆಂಪು ಅಂಗಿ, ಹಸಿರು ಟೋಪಿ ಧರಿಸಿದ್ದರು.

ಸಧ್ಯ - ಶೌರಿ ನನ್ನ ಕಣ್ಣಿಗೆ ಬೀಳಲಿಲ್ಲ.

ಟಿಪ್ಪು ನಮ್ಮ ವಾದ್ಯಗಳನ್ನು ಹೊತ್ತು ತಂದ. ತುಸ ಹೊತ್ತಿನಲ್ಲೇ ಅವನೂ ಕಚ್ಚೆ ಪಂಚೆ, ಹಸಿರು ಟೋಪಿ, ಕೆಂಪು ಕೋಟು ಧರಿಸಿ ಪ್ರತ್ಯಕ್ಷನಾದ.

ಹೊರಗೆ ಚಪ್ಪರದಲ್ಲಿ ಗುಲ್ಲೇಗುಲ್ಲು. ನಾನಿದ್ದ ಗ್ರೀನ್‌ರೂಮಿನಿಂದ ಸ್ಟೇಜಿಗೆ ಏನೇನೋ ಚಟುವಟಿಕೆ ಆಗುತ್ತಿದ್ದವು. ನನಗೆ ಯಾವುದೂ ತಲೆಗೆ ಹೋಗಲೇ ಇಲ್ಲ. ಇದೆಲ್ಲ ಕನಸು - ನಾನು ನಿದ್ರೇಲಿದ್ದೇನೆ - ನಾನು ನನ್ನ ರೂಮಿನಲ್ಲೇ ಇದ್ದೇನೆ - ಎಚ್ಚರವಾದರೆ ಎಲ್ಲಾ ಯಥಾಸ್ಥಿತಿ - ಅಂತ ಅಂದುಕೊಂಡ ಹಾಗೆ ಜ್ಞಾಪಕ.

''ಸರ್..''

ಬೆಚ್ಚಿದೆ.

ಬಾಬು ಒಂದು ಗ್ಲಾಸಿನಲ್ಲಿ ಏನೋ ದ್ರಾವಕ ಮಿಕ್ಸ್ ಮಾಡಿ ನನಗೆ ಸಿಪ್ ಮಾಡಿಸಿದ. ನನ್ನ ಬಾಡೀಲಿ ನರಗಳ ಬಡಿತ ಕಮ್ಮಿಯಾಗಿ ಒಂದು ರೀತಿ ಹಗುರವಾದೆ.

''ಸರ - ನಿಮ್ಮ ಗುರುತು ಇಲ್ಲಿ ಯಾರಿಗೂ ಸಿಗದೇ ಇರ್ಬೇಕಾದ್ರೆ ನಿಮ್ಮ ಪ್ಯಾಂಟು ಷರ್ಟು ತೆಗೆದು - ನಮ್ಮ ಹಾಗೆ ಕಚ್ಚೆ ಪಂಚೆ - ಕೆಂಪು ಕೋಟು - ಹಸಿರು ಟೋಪಿ ಧರಿಸಿ ಬಿಡಿ ಸರ್..'' ಅಂದು ಟಿಪ್ಪು.

''ಷಹಭಾಸ್ ಬಚ್ಚ - ದಾಲ್ ದಾಲೋ ಪಾಂಡು!'' ಅಂತ ಹುರುದುಂಬಿಸಿದ - ಬಾಬು.

''ನೋ!..'' ಅಂದೆ

''ಟಿಪ್ಪು - ನಿನ್ನ ಸಾರ್‌ಗೆ ಕೆಂಪು ಜುಬ್ಬ ಇದ್ರೆ ತಕೊಂಬಾ - ನಾನು ವೇರ್ ಮಾಡಿಸ್ತೇನೆ..'' ಅಂದ ಬಾಬು.

ಸಮುದ್ರದಲ್ಲಿ ಬಿದ್ದ ಮೇಲೆ ತಿಮಿಂಗಿಲ ಏನು - ಷಾರ್ಕೇನು? - ಎನ್ನುವಷ್ಟು ಆಗಿತ್ತು ನನ್ನ ಪರಿಸ್ಥಿತಿ. ಬಾಬು ಪ್ರಾಮಿಸ್ ಮಾಡಿದ ಹಾಗೆ ನನಗೆ ಡ್ರೆಸ್ ಮಾಡಿಸಿ - ನನ್ನ ಬಾಯಲ್ಲಿ ಒಂದು ಡನ್‌ಹಿಲ್ ಇಟ್ಟು ಹೊತ್ತಿಸಿದ. ನನ್ನ ಕಾಲುಗಳಿಗೆ ಗೆಜ್ಜೆ ಕಟ್ಟಿದ.

''ರೆಡಿ ಸರ್!!''

ಜೀರೋ ಅವರ್ ಬಂದೇ ಬಿಡ್ತು.

ನನ್ನನ್ನು ಕಂಜಿರ ಸಹಿತ - ಈ ಕಡೆ ಬಾಬು - ಆ ಕಡೆ ಟಿಪ್ಪು - ಹಿಡಿದುಕೊಂಡು ರಂಗಸ್ಥಳದ ಮೇಲೆ ನಿಲ್ಲಿಸಿದ ಜ್ಞಾಪ್ಕ.

ಧಾಗಿನಕ-ನಕ-ಧಿನ್ ಝಣ್ ಝಣ್ ಝಣ್ ಝಣ್ - ಶುರುವಾದ ಜ್ಞಾಪಕ - ಎಷ್ಟು ಹೊತ್ತು ಕಳೆಯಿತೋ ಗೊತ್ತಾಗಲಿಲ್ಲ - ಎಲ್ಲಾ ಕನಸಿನ ಸೀನ್‌ನಲ್ಲಿ ನಡೆಯೋ ರೀತೀಲಿ ನಡೆದು ಹೊಯ್ತು.

''ಷಹಭಾಸ್ ಪಾಂಡು! ಕ್ಯಾರಿ ಆನ್!!''

ಒಂದೇ ಕೂಗು!

ನನ್ನ ಮುಂದೆ ಪ್ರೇಕ್ಷಕರ ಗುಂಪಿನಲ್ಲಿ ನಮ್ಮ ಮೈಗಳ್ಳರ ಸಂಘದ ಪಟಾಲಂ ಪೂರ್ತಿ - ಶೀನಿ, ಕಿಟ್ಟಿ, ವೆಂಕು, ಟಿಪ್ಸಿ, ಶ್ರೀಕಂಠ, ನಾಣಿ, ರಾಜ, ಪೀಟರ್, ಫಾಸ್ಟ್ ಬೌಲರ್ ಶಿಂಗ್ರೈಯಂಗಾರಿ, ರಾಘಣ್ಣ, ಜಗ್ಗ - ಎಲ್ರೂ ಜಮಾಯ್ಸಿದ್ದಾರೆ - ಸಕುಟುಂಬ ಪರಿವಾರ ಸಮೇತರಾಗಿ! ಬಾಬು ತಬಲಾಲಿ ಧಾಗಿನಕ-ನಕ-ಧಿನ್ - ಶುರು ಮಾಡಿದ - ಮುಂದಿದ್ದ ಮುಟ್ಠಾಳ್ರೆಲ್ರೂ ತಾಳ ಹಾಕೋಕೆ ಶುರುಮಾಡಿದರು. ನಾನು ಕಂಜಿರ ಸಾಥೀಲಿ - ಪುನಃ ಮೂರು ಆವರ್ತ ಡ್ಯಾನ್ಸ್ ಹುಡುಗರ ಜೊತೇಲಿ

ಮುಗಿಸಿದೆ - ಪ್ರಚಂಡ ಕರತಾಡನ!

ಅಂದು ರಾತ್ರಿ ನಮಗೆಲ್ಲಾ ಶಾಲೆಯಲ್ಲೇ ಪುಷ್ಕಳ ಭೋಜನ. ಎಲ್ಲರೂ ನನ್ನನ್ನ ಹೊಗಳಿದ್ದೆ ಹೊಗಳಿದ್ದೇ.

''ನಾನು ನೋಡ್ದೇ ಇದ್ದಿದ್ದರೆ ನಂಬ್ತಾನೇ ಇರ್ಲಿಲ್ಲ'' ಅಂದ ನಮ್ಮ ಸಂಘದ ಅಧ್ಯಕ್ಷ ಟಿಪ್ಸಿ.

''ಮುಂದಿನ ದಸರಾಲಿ ನಿನ್ನ ಗ್ರೂಪ್‌ದೇ ಡ್ಯಾನ್ಸ್ ಪಾಂಡು!'' ಅಂದ ಮುಟ್ಠಾಳ ಶೀನಿ.

ನಾನು ಬಿಗುವಾಗಿಯೇ ಇದ್ದೆ.

ಊಟವಾದ ಮೇಲೆ ಬೀಡ ಸಿಗರೇಟ್ ಸೇವಿಸಿ ಎಲ್ಲರೂ ಹೊರಡೋಕೆ ರೆಡಿಯಾದರು. ಬಾಬು ಒಂದು ಮೂಲೇಲಿ ಕೂತಿದ್ದ. ನಾನು ಒಂದು ಮೂಲೇಲಿ ಬಿಗುವಾಗಿಯೇ ಇದ್ದೆ.

''ಕಾರು-ವ್ಯಾನು ರೆಡಿಯಾಗಿದೆ ಸರ್- ಮೈಸೂರಿಗೆ ಹೊರಡೋಣ..''

ಶೌರಿ!

''ಓಹೋ - ಶೌರಿ! ನಿನ್ನ ಕೆಲ್ಸವೆಲ್ಲಾ ಮುಗೀತೇ?'' ಬಿಗುವಾಗಿಯೇ ಕೇಳಿದೆ.

''ಮುಗೀತು ಸರ್ - ಬಾಬು ಹೇಳಿದರು ಸರ್ -ನೀವೂ ಅವರೂ ಸ್ನೇಹಿತರೂ ಒಟ್ಟಿಗೆ ವ್ಯಾನಿನಲ್ಲಿ ಪ್ರಯಾಣ ಮಾಡಿದರೆ , ಕಾರಲ್ಲಿ - ವಾದ್ಯಗಳು- ಬಾಡಿಗೆಗೆ ತಂದಿರೋ ಡ್ರೆಸ್ಸುಗಳನ್ನು ಜೊತೇಲೇ ಸಾಗಿಸಬೋದೂಂತ..'' ಅಂದ.

ನನ್ನ ಸುತ್ತ ಮುಟ್ಠಾಳರು ಕರತಾಡನ ಮಾಡಿದರು.

ನನ್ನ ಕಾರಿನಲ್ಲಿ - ವಾದ್ಯಗಳು ಬಾಡಿಗೆ ಡ್ರೆಸ್ಸುಗಳು ತುಂಬಿದ್ದರಿಂದ - ನನಗೆ ಜಾಗವೂ ಇರಲಿಲ್ಲ - ಬೆಂಕೀಲೇ ಬಿದ್ದ ಮೇಲೆ ಛಳಿಯೇನು ಶೆಖೆಯೇನು ಅಂದುಕೊಂಡು ವ್ಯಾನ್ ಹತ್ತಿದೆ. ನನ್ನ ಜೊತೆ ಮೈಗಳ್ಳರ ಸಂಘವೇ ಜಮಾಯಿಸಿತ್ತು. ಶೌರಿ - ನನ್ನ ಕೈಗೆ ಕಂಜಿರ ಕೊಟ್ಟು - ಓಪೆಲ್ ಸಾರಥ್ಯಕ್ಕೆ ಹೊರಟು ಹೋದ.

''ನಮಸ್ಕಾರ..ಮಾಸ್ಟರ್‌ಗೆ!''

ವ್ಯಾನ್ ಹೊರಗೆ ಟಿಪ್ಪು ಜೊತೆ ಆರು ನನ್ನ ಶಿಷ್ಯರು! ಎಷ್ಟು ತಡೆದರೂ..ನಗು ಉಕ್ಕಿ ಬಂತು.

''ನಮಸ್ಕಾರ - ಪುನಃ ಟಿಪ್ಪು ಜೊತೆ ಬನ್ರೋ!'' ಅಂದೆ.

''ಧಾಗಿನಕ-ನಕ-ಧಿನ್! ..'' ಬಾಬು ಶುರುಮಾಡಿದ.

ನಾನು ಕಂಜರೀಲಿ ಶುರು ಮಾಡಿದೆ - ಹದಿನೈದು ಜೊತೆ ಕೈಗಳ ಚಪ್ಪಾಳೆ ತಾಳದೊಂದಿಗೆ ಮೈಸೂರು ಸೇರಿದೆವು.

ಮರುದಿನ ಮುಂಜಾನೆ ಶೌರಿ ನನ್ನ ಕಾಫಿ ತಂದ

''ಶೌರಿ..''

''ಸರ್..''

''ನಿಜ ಹೇಳು - ನಿನ್ನೆಯ - ಛೆ! ಈ ಒಂದು ವಾರದ ಆಟವೆಲ್ಲಾ - ನಿನ್ನ ಕಿತಾಪತಿ ತಾನೇ?''

''ಕ್ಷಮ್ಸಿ ಸರ್.. ಆ ಹೆಗ್ಗಡದೇವನ ಹುಡುಗರಿಗೆ ನಿಮ್ಮ ದೆಸೆಯಿಂದ - ಒಂದೊಂದು ಸೆಟ್ ಬಟ್ಟೆ - ಪುಸ್ತಕಗಳು ಸಿಕ್ಕದವು ಸರ್ - ಎಲ್ಲಾ ದನ ಕಾಯೋಕೆ ಬಿಟ್ಟು ಬಿಟ್ಟಿದ್ದ ಹುಡುಗರು..''

ಆ ಹುಡುಗರ ಜ್ಞಾಪಕ ಬಂದ ತಕ್ಷಣ - ನನ್ನ ಮನಸ್ಸಿನಲ್ಲಿ ಒಂದ ತರಹವಾಯ್ತು. ಎಷ್ಟೇ ಆಗಲಿ - ಅವರೆಲ್ಲ ನನ್ನ ಶಿಷ್ಯರು. ಅವರ ಜೊತೆ ಒಂದು ವಾರ ನಾನೂ ಹುಡುಗನಾಗಿ ಬಿಟ್ಟಿದ್ದೆ.

''ನನಗೆ ಸಿಕ್ಕಿದ ದುಡ್ಡಿನಿಂದ ಆ ಹುಡುಗರಿಗೆ ಮತ್ತೂ ಒಂದೊಂದು ಸೆಟ್ ಹೊಲಿಸಿಕೊಡ್ತೇನೆ ಸರ್..''

''ನಿನಗೆ ಯಾವ ದುಡ್ಡು ಸಿಕ್ತು?''

''ಕ್ಷಮ್ಸಿ ಸರ್ ನನ್ನ ಬಾಸ್ ಅವರನ್ನ ಹೆಗ್ಗಡದೇವನ ಕೋಟೆ ಜಾತ್ರೇಲಿ ಸ್ಟೇಜ್ ಮೇಲೆ ಕುಣಿಸಿ ಬಿಡ್ತೇನೆ ಅಂತ ಬಾಬು ಮತ್ತು ಇತರೇ ಸದಸ್ಯರ ಹತ್ತಿರ ತಲಾ ಐವತ್ತು ಐವತ್ತು ರೂಪಾಯಿ ಕಟ್ಟಿದ್ದೆ..''

ನನಗೆ ದಿಗ್ಭ್ರಮೆಯಾಯ್ತು!

ಬಾಬು!

''ಬಾಬು - ನನ್ನ ಜೊತೆ ಸೇರ್ತಾರೇಂತ ನಾನು ಊಹಿಸಿರಲಿಲ್ಲ ಶೌರಿ..''

''ಅವರೂ ನಂಜೊತೇಲೇ ಇದ್ರು ಸರ್ - ಡೋಂಟ್ ಫಿಕರ್ ಬಸ್ ಇಮಾಮ್ ಸಾಹೇಬರದೇ ಪ್ಲ್ಯಾನು..''

ತುಸ ಮೆಲುಕು ಹಾಕಿದೆ.

ಮುಂದಿನ ಭಾನುವಾರ ಆ ಮಂಗಗಳನ್ನೆಲ್ಲಾ ಇಲ್ಲಿಗೆ ಬರಹೇಳು - ಅವರಿಗೆಲ್ಲರಿಗೂ ನಾನು ಏನಾದರೂ ಕೊಡಬೇಕು.

''ಗೆಜ್ಜೆಗಳ ಸಮೇತ ಟಿಪ್ಪು ಕರ್ಕೊಂಡ ಬರ್ತಾನೆ ಸರ್..'' ಅಂದ

''ಸರಿ ಶೌರಿ'' ಅಂದೆ.

★★★

# ಕನಸ ಬಿತ್ತುವವರು

ಅರುಣಾ ಆರ್. ಕಾರಂತ,



ಕನಸ ಹಂಚುವರಿಲ್ಲಿ
ನರಸಿಂಹರಾಯರು ನೋಡಿ,
ದೂರದರ್ಶನದಿಂದ ದಿನಕೆ ನೂರು ಬಾರಿ,
ತನ್ನೊಳಗೆ ತಾ ನಗುವ
ತಾನು ಬೀಸಿದ ಬಲೆಗೆ
ಜನರು ಬಿದ್ದಾರೆಂಬ ಭ್ರಮೆಯು ಮೂಡಿ

ಬಣ್ಣ ಬಣ್ಣದ ಕಥೆಯ
ಕಟ್ಟಿ ಹೇಳುವ ಮುದುಕ
ಮಾತುಗಾರನು ಈತ ಬಲು ಮೋಡಿಕಾರ,
ಅಪಸ್ವರವು ಕೇಳಿಸದ
ಕುಶಲ ಕಿವುಡನಿವನು ಕುರುಡ ಮೂಕ

ಬರಡು ನೆಲ ಹಸಿರಾಗಿ
ಬರಡೆಲ್ಲ ಹಯನಾಗಿ

ಎಲ್ಲ ಸಾಕ್ಷರರಾಗಿ ಸಮೃದ್ಧರಾಗಿ,
ಬಡತನವು ದೂರಾಗಿ
ಸಂತಸವು ನೂರಾಗಿ
ಕಾಳುಗಟ್ಟಿತು ಕನಸು ಟೀವಿಯಲ್ಲಿ

ಕನಸಿನಂತೆಯೇ ಸಂತೆ
'ಪೂ. ಚಂ. ತೇ. ಎನ್ನುವರು
ಕನಸ ಹಂಚುವ ಸಂತೆ ನರಸಿಂಹರಾಯರದು,
ಜನ ನೋಡಿ ಮುಖ ನೋಡಿ
ಯಾವ ವ್ಯವಹರವಿಲ್ಲ
ಕನಸ ಕಟ್ಟುವರಿಲ್ಲ ಜನರ ನಾಡಿ ನೋಡಿ

ಅಕ್ಷರತೆಯ ಅರಿವು
ಆದರ್ಶದಾ ಮಾತು
ಅರಿವಾಗುವುದೇ ಬೇಡ ಜನಕೆ ನಿಜಕು
ಅರಿವಾದರಳಿವುದು
ಸರಕಾರ ಗದ್ದಿಗೆಯು-
ಉರುಳುವುದು ಜನತಂತ್ರಕಪಮಾನವೆನುವ

ನೂರು ಯೋಜನೆಗಳನು
ಗಾಳಿಪರದೆಯ ಮೇಲೆ
ಕಣ್ಗೆಕಟ್ಟುವಂತೆ ಬಿಡಿಸಿ ಬಣ್ಣದಲಿ,
ದಿನದಿನವು ಹರಿದು ಬರೆ
ದೂರದರ್ಶನದಲ್ಲಿ
ಜನಕಿಲ್ಲ ಸ್ವರ್ಗವು ದೂರ ಕೈಗೆಸನಿಹ

ಕನಸ ಬಿತ್ತುವರಿಲ್ಲಿ
ನರಸಿಂಹರಾಯರು ನೋಡಿ
ಟೀವಿ ಪರದೆಯ ಮೇಲೆ ಜನಕೆ ಬಾರಿ ಬಾರಿ

# ಸೌಲಭ್ಯ ಕಿರಿಕಿರಿ

ಅ.ರಾ.ಸೇ.

(ಶ್ರೀಮತಿ ಕಮಲಾರಾಮಸ್ವಾಮಿ ಅವರಿಗೆ ಅರ್ಪಿತ)

ಕೆಲವು ವರ್ಷಗಳ ಹಿಂದೆ, ಕಾಲ ಎಷ್ಟು ...... ಹೀಗೆಲ್ಲಾ ಯೋಚಿಸಲು ನಾನೇನು ಮುದುಕನಲ್ಲ. ನನಗಿನ್ನೂ ಮೂವತ್ತಾಗಿಲ್ಲ. ಆದರೂ ಈಗಿನ ಪರಿಸ್ಥಿತಿ ನನ್ನನ್ನು ಹೀಗೆ ಯೋಚಿಸುವಂತೆ ಮಾಡಿದೆ.

ಕೆಲವು ವರ್ಷಗಳ ಹಿಂದೆ ನಾನು ಕಾಲೇಜಿನಲ್ಲಿದ್ದೆ. ಈಗ ತಾಪೇದಾರಿಯಲ್ಲದಿದ್ದರೂ ಅದರ ಹತ್ತಿರ ಹತ್ತಿರ. ಕರಣಿಕನ ಕೆಲಸ ಮಾಡುತ್ತಿದ್ದೇನೆ. ಸ್ಟೆಲ್ಲಾರ್ ಟೆಕ್ನೋ ಟೆಕ್ಸ್ (ಇನ್ಕಾರ್ಪೊರೇಟೆಡ್?) ಎಂ. ಡಿ. ಯ ಪಿ. ಎ. ಆಫೀಸು-ಮನೆ, ಮನೆ-ಆಫೀಸು. ಜೀವನ ತುಂಬ ಸ್ವಾರಸ್ಯಕರವಾಗಿದೆ. ಜೇಮ್ಸ್ ಬಾಂಡ್ ಹಾಗೆ ಒಬ್ಬಳಲ್ಲ ಒಬ್ಬಳು ನನಗೊಲಿದು(?)..... . ಆದರೆ ನನ್ನ ಜೀವನ ಫೈಲುಗಳ ಭಾರದಿಂದ ಕುಸಿಯುವಂತೆ ಭಾಸವಾಗುತ್ತಿದೆ. ಇಷ್ಟೇ ಏನು ಈ ಜೀವನ? ಸಂಬಳ ಮಾತ್ರ ಸ್ವಾರಸ್ಯಕರವಾಗಿಲ್ಲ. ಒಂದು ಹತ್ತು ಸಾವಿರ ಬರುತ್ತಿದೆ ಅಂದರೂ, ಆಫೀಸು ತಪ್ಪುವುದಿಲ್ಲ. ಅದನ್ನು ಖರ್ಚು ಮಾಡಲು ಯಾವ ಪ್ಲ್ಯಾನೂ ಹಾಕಿಕೊಳ್ಳುವಂತಿಲ್ಲ. ರಜ ಇದ್ದರೆ ತಾನೇ? ರಾತ್ರಿ ಒಂದು ಗಂಟೆ, ಸಂಜೆ ಆರು ಗಂಟೆ, ಬೆಳಗಿನ ಜಾವ ನಾಲ್ಕು ಗಂಟೆ, ಯಾವಾಗಂದರೆ ಆಗ ನಮ್ಮ ಎಂ. ಡಿ. ಯ ತಲೆಯೊಳಗಿನ ನಟ್ಟು ಲೂಸ್ ಆಗಿ ನನ್ನ ಮನೆಯ ಮುಂದೆ ಕಾರು ತಂದು ನಿಲ್ಲಿಸುತ್ತಾನೆ. ಕಟ್ಟು ಗ್ರಂಥವ ಏಳು ಸಾಯಣ, ತುಂಗಭದ್ರಾ ತೀರಕೆ! ಹೊಂಟು ಹೋಗಲೇಬೇಕು. ಹೋದರೆ ಅಲ್ಲಿ ಏನೂ ಇಲ್ಲ. ಕುಡುಡನ ಏಕಾಂತ ಮೂರು ಉಳ್ಳಾಗಡ್ಡೆ. ಒಂದೇ ವಾಕ್ಯದಲ್ಲಿ ಹೇಳಬೇಕೆಂದರೆ Nothing ever changes ಆದರೆ You never can tell. ಬದಲಾವಣೆ ಆಗಿಯೇ ಬಿಟ್ಟಿತು.

ಆ ಭಾನುವಾರ ಬೆಳಿಗ್ಗೆ ಒಂಭತ್ತು ಗಂಟೆಗೆ ಎದ್ದೆ. ಅಮ್ಮ ಬೆಡ್ ಕಾಫೀ ಎಂದು ಕೂಗಿದೆ. ಮುಖ ತೊಳೆದುಕೊಂಡು, ದೇವರಿಗೆ ನಮಸ್ಕಾರ ಮಾಡಿ ಬಾ ಎಂದು ಅಮ್ಮ ಗದರಿಕೊಂಡಳು. ಹಾಗೆಯೇ ಮಾಡಿದ ಮೇಲೆ ಕಾಫಿಕೊಟ್ಟು ಎಷ್ಟು ದಿನದಿಂದ ಈ ಆಟ ನಡೆಯುತ್ತಿದೆ ಎಂದು ಕೇಳಿದಳು. ಯಾವ ಆಟ ಎಂದು ಕೇಳಿದರೆ ಅವಳು ನನಗೆಲ್ಲಾ ಗೊತ್ತು, ಮುಚ್ಚುಬಾಯಿ ಎಂದಳು. ಭಾನುವಾರದ ಮೂಡೇ ಔಟಾಯಿತು. ಏನಾಗಿದೆಯೋ ಏನೋ ಅಮ್ಮನಿಗೆ, ಎಂದುಕೊಂಡೆ.

'ಯಾರವಳು?' ಎಂದು ಕೇಳಿದಳು.

'ಯಾವಳು?' ಎಂದೆ.

ಬೆಳಿಗ್ಗೆ ಏಳು ಗಂಟೆಯಿಂದ ಮೂರು ಸಾರಿ ಬಂದು ಹೋಗಿದ್ದಳಂತೆ. ತೆಳ್ಳಗೆ ಬೆಳ್ಳಗೆ

ಕೂದಲು ಚೆಲ್ಲಿ ಮೊಡೆದುಕೊಂಡು, ನಲವತ್ತೆಂಟು ಪಲ್ಲು ಕಿರಿಯುತ್ತಾ, ಕಡಗೋಲಿನ ಹಾಗೆ ಒಯ್ಯಾರ ಮಾಡುತ್ತಾ ಇದ್ದಳಂತೆ. ನನಗೆ ಯಾವಳೂ ಗೊತ್ತಿಲ್ಲ. ಯಾರ ಆಣೆ ಬೇಕಾದರೂ ಇಡುತ್ತೇನೆ. ಅವಳು ಯಾಕೆ ಬಂದಳೋ ಗೊತ್ತಿಲ್ಲ ಎಂದು ದಬಾಯಿಸಿದೆ. ಅಮ್ಮ ಕಣ್ಣೀರಿಟ್ಟಳು. ಕಂಡಕಂಡವರ ಜೊತೆ ಸ್ನೇಹ ಮಾಡುವುದು ಸಿನಿಮಾದಲ್ಲೇ ಚೆಂದವೇ ಹೊರತು ನಿಜ ಜೀವನದಲ್ಲಲ್ಲ ಎಂದು ಬುದ್ಧಿವಾದ ಹೇಳಿದಳು.

ಕಾಫಿ ಕುಡಿದು ಸ್ನಾನ ಮಾಡಿ, ಸ್ವಲ್ಪ ಹೊರಗೆ ಹೋಗಿ ಬರುತ್ತೇನೆ ಎಂದು ಹೇಳಿ, ರಂಗಣ್ಣನಹೋಟೇಲಿಗೆಹೋದೆ. ಇಡ್ಲಿ ಇರಲಿಲ್ಲ, ದೋಸೆತಿಂದು ಕಾಫಿಕುಡಿದು ಒಂದು ಸಿಗರೇಟ್ ಹೊತ್ತಿಸಿ ಬಿಲ್ ಕೊಡಲು ಹೋದೆ. ರಂಗಣ್ಣ ಆ ಅಜ್ಞಾತ ಯುವತಿಯಂತೆ ನಲವತ್ತೆಂಟು ಹಲ್ಲು ಕಿರಿದು ಏನ್ಸಾರ್ ಪರವಾಗಿಲ್ಲ, ಏನೋ ಎಂದು ಕೊಂಡಿದ್ದೆ. ಯಾರು ಸಾರ್ ಆ ಮೇಡಂ ಎಂದಿತ್ಯಾದಿಯಾಗಿ ಕೇಳಿದ. ಬೀಡಿ ಅಂಗಡಿ ಶಂಕರನದೂ ಅದೇ ಕತೆ. ನಿಮ್ಮನ್ನು ಯಾರೋ ಕೇಳಿಕೊಂಡು ಬಂದಿದ್ದರು ಸಾ, ಏನು ಸಮಾಚಾರ?

ಪ್ರದೇಶಸಮಾಚಾರದಲ್ಲಿ ಬರುವುದೊಂದೇ ಬಾಕಿ. ಮನೆಗೆಹೋಗಿ ಅಮ್ಮನ ಪರ್ಮಿಷನ್ ತೆಗೆದುಕೊಂಡು ಮಾರ್ನಿಂಗ್ ಷೋಗೆ ಹೊರಟೆ. ಶೂಲಧಾರಿಯಲ್ಲಿ ಬರ್ನಿಂಗ್ ಲವ್ ಫೈರ್ ಅಂತ ಯಾವುದೋ ಹಾಲಿವುಡ್ ಸಿನಿಮಾ ಹಾದಿತಪ್ಪಿ ಬಂದಿತ್ತು. ಬರ್ನಿಂಗ್ ಲವ್ವೋ, ಬರ್ನಿಂಗ್ ಜೇಬೋ ನೋಡಿಬಿಡೋಣ ಅಂತ ಬಿರಬಿರನೆ ಹೊರಟೆ. ಎಂ. ಡಿ. - ಅವನನೆತ್ತಿ ತಂಪಾಗಿರಲಿ - ಮುಂಬಯಿಗೆ ಹೋಗಿದ್ದ. ಅಲ್ಲಿಂದ ಬೆಂಗಳೂರು, ಅಲ್ಲಿಂದ ಮುಗಿಲುಹಳ್ಳಿಗೆ ಬರುವಷ್ಟರಲ್ಲಿ ನಂದೋ ರಾಜಾ ಭವಿಷ್ಯತಿ.

ಕಿವಿಗೆಕಾಸಿದಸೀಸದಂತೆ 'ದರ್ಪೀ' 'ದರ್ಪೀ' ಎಂಬ ಕೂಗು ಕೇಳಿಸಿತು. ಯಾವುದೋ ಪರಿಚಯದ ಹೆಣ್ಣುದನಿ. ಸೌಕರ‍್ಯನದೇ? ಸೌಕರ‍್ಯ..... ಅಲ್ಲ. ಹಾಗಾದರೇ, ಸೌಕರ‍್ಯವಲ್ಲದಿದ್ದರೆ..... ಆಹ್ಹಾ - ಸೌಲಭ್ಯನದು. ಸೌಲಿಯದು. ಹಾಳಾಗಿಹೋದಳೆಂದು ನಿಶ್ಚಿಂತೆಯಿಂದ ಸುಖವಾಗಿದ್ದೆ.

ಸೌಲಭ್ಯ, ನನ್ನ ಬಿ.ಎಸ್ಸಿ ಕ್ಲಾಸ್‌ಮೇಟು. ಅಲ್ಲಿನ ಹಲವು ಹೆಂಗಳೆಯರಲ್ಲಿ ನೋಡಬಹುದಾದ ಒಬ್ಬಳೇ ಹುಡುಗಿ. ಭಯಂಕರ ಚೆಲ್ಲುಚೆಲ್ಲು. ಬೆಂಕಿಯಂತಹ ಹುಡುಗಿ. ನಾಲ್ಕಾರು ಬಾರಿ ಅವಳೇ ಮುಂದುವರಿದು ಮಾತನಾಡಿಸಿದ್ದಳು. ನಾನು ಮಾತಾಡಿದ್ದೆ. ಒಂದು ಬಾರಿ ಸ್ವಲ್ಪ ಮುಂದುವರಿದು ಡಾರ್ಲಿಂಗ್ ಎಂದಿದ್ದಳು. ನಾನು ಕತ್ತು ಹಿಡಿದು ತಳ್ಳಿದ್ದೆ. 'ಸೀಯೂ ಎಗೇನ್' ಎಂದು ಹೇಳಿ ಹೋಗಿದ್ದಳು. ಈಗ ಘಟಿಸಿದ್ದಾಳೆ.

ರಸ್ತೆ ತಡೆ ಚಳುವಳಿಯಲ್ಲಿ ನಿಂತ ಬಸ್ಸಿನಂತೆ ತಟಸ್ಥನಾಗಿ ನಿಂತೆ. ಸೌಲಭ್ಯ ಬಂದು "ದರ್ಪಕ್, ಹೇಗಿದ್ದೀ? ನಿನಗಾಗಿ ಎಷ್ಟು ಹುಡುಕುವುದು? ಒಂಭತ್ತಾದರೂ ಮಲಗಿದ್ದೆಯಲ್ಲ ಸೋಮಾರಿ, ನೀನು ಜೀವನದಲ್ಲಿ ಏನು ತಾನೆ ಸಾಧಿಸಬಲ್ಲೆ? ಬಾ, ಕಾಫಿ ಕೊಡಿಸು. ನಿಮ್ಮ ಮನೆಗೆ ಬರಲಾರೆ. ನಿಮ್ಮಮ್ಮ ನನ್ನನ್ನು ಹೇಗೆ ನೋಡಿದಳು ಗೊತ್ತೆ. ವರದಕ್ಷಿಣೆ ತಾರದ ಸೊಸೆಯನ್ನು ಇನ್ನೇನು ಸುಡಲು ಸಿದ್ಧವಾಗಿರುವ ಅತ್ತೆಯ ಹಾಗೆ ನೋಡಿದಳು. ದೇವರೇ ಗತಿ! ಮುಂದೆ ಏನು ಕಾದಿದೆಯೋ? ಇರಲಿ, ನಿನ್ನ ಹತ್ತಿರ

ಅರ್ಜೆಂಟಾಗಿ ಮಾತಾಡಬೇಕು, ರಹಸ್ಯವಾಗಿ ಎಂದಳು.

ರಂಗಣ್ಣನ ಹೋಟಲಿಗೆ ಕರೆದುಕೊಂಡು ಹೋದೆ. ಅಲ್ಲಿ ರಂಗಣ್ಣನ ಖಾಸಗಿ ಕೋಣೆಯಿದೆ. ಅದರ ಬೀಗದ ಕೈ ಇಸಿದುಕೊಂಡು ಅವಳನ್ನು ಕರೆದುಕೊಂಡು ಹೋಗಿ, ಒಂದು ಚಾಪೆಯಮೇಲೆ ಕೂಡಿಸಿದೆ. ಅಲ್ಲಿ ಯಾರಕಾಟವೂ ಇಲ್ಲ. ನೀರುಳ್ಳಿ, ಮುಳಗಾಯಿ, ಕೋಸುಗಡ್ಡೆ, ಹಸಿಮೆಣಸಿನಕಾಯಿ, ಸೊಳ್ಳೆ, ನೊರಜುಗಳು ಮಾತ್ರ.

''ಸೌಲೀ, ತನುವೂ ನಿನ್ನದೇ, ಮನವೂ ನಿನ್ನದೇ, ಎಂದೆಂದೂ ನಿನ್ನವನೇ. ಪ್ರೇಮವೊಂದನ್ನು ಬಿಟ್ಟು ಇನ್ನೇನಾದರೂ ಚಿಂತೆಯಿಲ್ಲ ಹೇಳು. ಕೇಳಲು ಸಿದ್ಧನಾಗಿದ್ದೇನೆ'' ಎಂದೆ.

ಸೌಲಭ್ಯ ಆರಂಭಿಸಿದಳು ಮಾತು, ಅವಳು ಬಿ.ಎಸ್ಸಿ. ಮುಗಿಸಿ, ಕಿನ್ನಾಷ ಯೂನಿವರ್ಸಿಟಿಯ ಆರ್ಕಿಟೆಕ್ಚರ್ ಡಿಗ್ರಿಯನ್ನು ಎಕ್ಸ್‌ಟರ್ನಲ್ ಆಗಿ ತೆಗೆದುಕೊಂಡಳಂತೆ. ಅವಳ ಅಪ್ಪ, ಅಮ್ಮನಿಗೆ ಅವಳೊಬ್ಬಳೇ ಮಗಳಂತೆ. ಈಗ ಅವಳು ಹೊಸದಾಗಿ ತಮ್ಮ ಮನೆಕಟ್ಟಬೇಕಂತೆ. ಅದಕ್ಕಾಗಿ ವಾಸ್ತುಶಾಸ್ತ್ರ ಏನು ಹೇಳಿತ್ತದೆ ಎಂದು ಕೇಳಲು ನನ್ನ ಬಳಿಗೆ ಬಂದಿದ್ದಳಂತೆ.

ಊರಿನಲ್ಲಿ, ಅದರಲ್ಲೂ ಹಳೆ ಮುಗಿಲುಹಳ್ಳಿಯಲ್ಲಿ ಬೀದಿಗಿಬ್ಬರು ಜ್ಯೋತಿಷ್ಯಶಾಸ್ತ್ರ ಕಲಿತವರಿದ್ದಾರಂತೆ. ಆದರೆ ಅವರಲ್ಲಿ ಅವಳಿಗೆ ನಂಬಿಕೆ ಬರಲಿಲ್ಲ. Let me consult my darling ದರ್ಪಿ ಎಂದು ಯೋಚಿಸಿ ಬಂದಿದ್ದಾಳಂತೆ. ಏನು ಹೇಳಲಿ! ಏಳೇಳು ಗಲ್ಲಿಗಳನ್ನೂ, ಏಳೇಳು ರಸ್ತೆಗಳನ್ನೂ, ಏಳೇಳು ಸರ್ಕಲ್ಲುಗಳನ್ನೂ ದಾಟಿ ನನ್ನ ಬಳಿಗೆ ಬಂದಿದ್ದಾಳೆ. ನನಗೆ ಏನೇನೂ ಗೊತ್ತಿಲ್ಲ ಎಂದು ಹೇಳಿದರೆ ಅವಳು ಕೇಳಲಿಲ್ಲ. ಕಳೆದ ವಾರ ನಮ್ಮ ಎಂ.ಡಿ. ಅವಳ ಅಪ್ಪನಿಗೆ ಹೇಳಿದನಂತೆ. 'ಅವನಾಪ್ಪ, ಇದಕ್ಕೆಲ್ಲಾ ಯಾಕೆ ಏಚ್ಚೆ ಮಾಡ್ತಿ? ನಂ ದರ್ಪಕನ್ನ ಕೇಳು ಹೇಳ್ತನೆ ಅಂತ. ಅದಕ್ಕೇ, ಅಪ್ಪನ ಅಪ್ಪಣೆ ಪಡೆದು ಅವಳು ಬಂದಳಂತೆ.

ನಾನು ಹೇಳಿದೆ :

ನೋಡು ಸೌಲೀ, ನನಗೆ ವಾಸ್ತು, ಪ್ರೇಮ, ಕಿನ್ನಾಷ, ಸರಯೇವೋ ಯಾತರದ್ದೂ ಗೊತ್ತಿಲ್ಲ. ನನ್ನ ಕಾಡಬೇಡ.

ಸೌಲಭ್ಯ ಒಪ್ಪಲಿಲ್ಲ. ಆದ್ದರಿಂದ ನಾನು ನಮ್ಮ ದೀಕ್ಷಿತರ ಹತ್ತಿರ ಕೇಳಿ ತಿಳಿದಷ್ಟನ್ನು ಅವಳಿಗೆ ಹೇಳಿದೆ.

''ಸೌಲೀ, ವಾಸ್ತು ಅನ್ನುವವನು ಒಬ್ಬ ರಾಕ್ಷಸ''.

''ಎಲ್ಲಿಯವನು ದರ್ಪಿ, ಗಾಜ್ಞಾದಲ್ಲಿದ್ದನೋ ಕಾಬೂಲಿನಲ್ಲಿದ್ದನೋ, ಡೋಡಾದಲ್ಲಿದ್ದನೋ, ಜಾಫ್ನಾದಲ್ಲಿದ್ದನೋ?''

ಮೊದಲೇ ಸೌಲಭ್ಯಳ ಸಾಮೀಪ್ಯ ನನ್ನನ್ನು ಅಧೀರನನ್ನಾಗಿಸಿತ್ತು. ಇನ್ನಿವಳ ಪ್ರಶ್ನೆಗಳು ಮುಂದುವರಿದರೆ ಕಥೆ ಮರೆತುಹೋಗುವಂತಾದೀತು ಎಂದುಕೊಂಡು ಅವಳನ್ನು

ಸುಮ್ಮನಿರಲು ಸನ್ನೆ ಮಾಡಿ ಮುಂದುವರಿಸಿದೆ :

ಹಿಂದೆ, ಇಂದಿನಂತೇ, ದೇವಾಸುರರಿಗೆಯುದ್ಧವಾಯಿತು. ಇಂದಿನಂತೆಯೇ ರಾಕ್ಷಸರ ಕೈ ಮೇಲಾಯಿತು. ದೇವತೆಗಳು ತ್ರಿಮೂರ್ತಿಗಳನ್ನು ಮರೆಹೊಕ್ಕರು. ಬ್ರಹ್ಮಸೃಷ್ಟಿಗೆ ಅಧಿಪತಿ, ವಿಷ್ಣುಸ್ಥಿತಿಗೆ ಅಧಿಪತಿ, ರುದ್ರಲಯಕ್ಕೆ ಅಧಿಪತಿ. ಆಗ, ವಿಷ್ಣು ತನ್ನ ರಾಕ್ಷಸಾಂತಕನೆಂಬ ಬಿರುದನ್ನುಳಿಸಿಕೊಳ್ಳಲು - ಪಾಪ, ಅವನಿಗೆ ರಾಕ್ಷಸರೊಡನೆ ಯುದ್ಧಮಾಡಿ ಮಾಡಿ ಬೇಸರ ಬಂದಿತ್ತು. ತಾನೇ ಮುಂದುವರಿದು ದೇವತೆಗಳಿಗೆ ಹೀಗೆ ಹೇಳಿದ.

ಸೌಲಭ್ಯ ''ಎಕ್ಸ್‌ಕ್ಯೂಸ್ ಮೀ. ರುದ್ರನು ಲಯಕ್ಕಧಿಪತಿಯಾದ್ದರಿಂದ ಅದು ಅವನ ಕೆಲಸವಲ್ಲವೇ?'' ಎಂದಳು.

ನಾನು ''ಅದು ಹಾಗಲ್ಲ. ರುದ್ರನಿಗೆ ಒಂದು ವಿಷಯ ಗೊತ್ತಿತ್ತು. ಹುಟ್ಟಿದ್ದು ಹೇಗಿದ್ದರೂ ಸಾಯುತ್ತದೆ. ಆದ್ದರಿಂದ ಅದಕ್ಕಾಗಿ ಚಿಂತಿಸುವುದು ಅನಗತ್ಯ. ಅವನು ಆಕ್ರಂದಯತೇ ಪತ್ತೀನಾಂ ಪತಿ - ಅಂದರೆ ಗರ್ಜಿಸಿ ಯುದ್ಧಕ್ಕೆ ನುಗ್ಗುತ್ತಿರುವ ಸೈನ್ಯಗಳ ಒಡೆಯ. ಸುರರಿಗೂ ಅಸುರರಿಗೂ. ಆಗಲಿ ಇನ್ನಾದರೂ ಪ್ರಶ್ನೆ ಕೇಳಬೇಡ'' ಎಂದು ಮುಂದುವರಿಸಿದೆ.

ವಿಷ್ಣು ಹೇಳಿದ. ನಾನು ಯುದ್ಧಕ್ಕೆ ಬರುತ್ತೇನೆ ಎಂದು ಹೊರಟ. ಜಂಭ, ದಂಭೋದ್ಭವ......''.

ಸೌಲಭ್ಯ ನಡುವೆ ಮೂಗು ತೂರಿಸಿ ''ದಂಭೋದ್ಭವ ಎಂದರೇನು?''

ನಾನು ಹೇಳಿದೆ :

ರೈಟ್. ಎಲ್ಲಾ ದುರಾಚಾರಗಳೂ ಉಂಟು. ಆದರೆ ನ್ಯೂ ಹೊರೈಜನ್. ಬಡತನದ ನಿರ್ಮೂಲನ, ಸೆಕ್ಯುಲರ್ ಮನೋಭಾವ, ಸ್ಥಿರತೆ ಇತ್ಯಾದಿ ಘೋಷಣೆ ಕೂಗುವುದು. ಮಕ್ಕಳ, ಸ್ತ್ರೀಯರ, ನೊಂದವರ, ಬೆಂದವರ ಉದ್ಧಾರವೇ ನನ್ನ ಗತಿ ಎನ್ನುವುದು. ಹಣ ಡೀವ್ಯಾಲ್ಯೂ ಆದರೂ ಚಿಂತೆಯಿಲ್ಲ. ಬೆಲೆಗಳು ಗಗನಕ್ಕೇರಿದರೂ ಚಿಂತೆಯಿಲ್ಲ. ಇನ್ನು ನೂರು ದಿನಗಳಲ್ಲಿ ಅಲ್ಲದಿದ್ದರೆ ನೂರುವರ್ಷಗಳಲ್ಲಿ ಸುಖದ ಸೂರೆ ಅನ್ನುವುದು ದಂಭ. ಕತೆ ಕೇಳು.

ಜಂಭ, ದಂಭೋದ್ಭವ, ಕಾಲನೇಮಿ ಎಂಬ ರಾಕ್ಷಸರೆಲ್ಲರೂ ಗೊಟಕ್ಕೆಂದರು. ಆದರೆ ವಾಸ್ತು ಎಂಬ ರಾಕ್ಷಸ ಮಾತ್ರ ಸಾಯಲಿಲ್ಲ. ಆಗ ವಿಷ್ಣು ಅನಾಮತ್ತಾಗಿ ಅವನನ್ನೆತ್ತಿ ನೆಲಕ್ಕೆ ಬಡಿದು ಅವನ ಮೇಲೆ ನಿಂತ. (ಸೌಲಭ್ಯ ಚಪ್ಪಾಳೆ ತಟ್ಟಿ ವೌವ್, ಗ್ರೇಟ್ ಎಂದರೂ ಕೇಳದವನಂತೆ ಮುಂದುವರಿಸಿದೆ)

ಎಷ್ಟು ಹೊತ್ತು ಹಾಗೇ ಇರಲು ಸಾಧ್ಯ? ಅವನು ಐವತ್ತಮೂರು ದೇವತೆಗಳನ್ನು ಕರೆದು ವಾಸ್ತುವಿನ ಮೇಲೆ ನಿಲ್ಲಲು ಹೇಳಿ ವೈಕುಂಠಕ್ಕೆ ಹೊರಟ.

ಆಗ ವಾಸ್ತು ಪಶ್ಚಾತ್ತಾಪದಿಂದ ದಗ್ಧನಾಗಿ ''ಭೋ ವಿಷ್ಣು, ನನಗೆ ಪಶ್ಚಾತ್ತಾಪವಾಗಿದೆ.

ನಾನು ಜನಗಳನ್ನು ಪೀಡಿಸಿದೇನೇ ಹೊರತು ಅವರಿಗೆ ಏನೂ ಒಳಿತು ಮಾಡಲಿಲ್ಲ. (ಸೌಲಭ್ಯ ನಿನ್ನ ಹಾಗೇ ಎನ್ನು ಎಂದಳು)

ನನ್ನನ್ನು ಜನರು ಮರೆಯಬಾರದು. ಹಾಗೆ ಏನಾದರೂ ವ್ಯವಸ್ಥೆ ಮಾಡು, ಎಂದು ಬೇಡಿಕೊಂಡ. ಅದಕ್ಕೇ ವಾಸ್ತುವನ್ನು ಜನ ನೋಡಿಕೊಳ್ಳದಿದ್ದರೆ ಅವರು ಕಷ್ಟಕ್ಕೆ ಗುರಿಯಾಗುವುದು ಖಂಡಿತ. ವಾಸ್ತು ಪುರುಷನು ಮನೆಗಳಲ್ಲಿ ನೆಲೆಸಿ ಅಲ್ಲಿನ ಜನ ಏನು ಹೇಳಿದರೂ ತಥಾಸ್ತು ಅನ್ನುತ್ತಾನೆ. ಅದಕ್ಕೇ ಅಶುಭವನ್ನಾಡಬಾರದು ಅಂತಾರೆ ಹಿರಿಯರು. ನನಗೆ ವಾಸ್ತುವಿನ ಬಗ್ಗೆ ಗೊತ್ತಿರುವುದು ಇಷ್ಟೇ'' ಎಂದೆ.

ಸೌಲಭ್ಯ ಏಕ್ ದಂ ಗಂಭೀರವಾಗಿ ತಲೆ ಮೇಲೆ ಕೈಹೊತ್ತು ಕುಳಿತವಳು ಮೆಲ್ಲನೆ ತಲೆಯೆತ್ತಿದಳು.

ಸೌಲಿ - ''ಡಾರ್ಲಿಂಗ್ ದರ್ಪಕ್.....'' ಎಂದಳು.

ನಾನು - ''ಬರೇ ದರ್ಪಕ್ ಅನ್ನು. ಕಿಕ್ ದಿ ವರ್ಡ್ ಡಾರ್ಲಿಂಗ್''.

ಸೌಲಿ - ''ಡಾರ್ಲಿಂಗ್ ದರ್ಪಕ್, ಕೇಳು ನನಗೀಗ ಎಲ್ಲಾ ತಿಳಿಯಿತು''.

ನಾನು - ''ಅದೇನು ಹೇಳಿಬಿಡು''.

ಸೌಲಭ್ಯ, ಸ್ವಲ್ಪಹೊತ್ತು ಸುಮ್ಮನಿದ್ದು ಆರಂಭಿಸಿದಳು.

ಡಾರ್ಲಿಂಗ್ ದರ್ಪಿ, ನೀನು ನನ್ನನ್ನು ಅನಿಷ್ಟವೆಂದು ತಿಳಿದಿದ್ದೀಯೇ. ಆದರೂ ಚಿಂತೆಯಿಲ್ಲ. ಕೇಳು. ನೀನು ಹೇಳಿದ ಕತೆ ನನ್ನ ಕಣ್ಣು ತೆರೆಸಿದೆ. ಕಳೆದೊಂದು ದಶಕದಿಂದ ನನ್ನನ್ನು ಕಾಡಿಸುತ್ತಿದ್ದ ಒಂದು ಸಮಸ್ಯೆಗೆ ಉತ್ತರ ಸಿಕ್ಕಿತು. ದರ್ಪಕ್, ಇಡೀ ವಿಶ್ವದಲ್ಲಿ ಭರತಖಂಡ ಅತ್ಯಂತ ಶ್ರೇಷ್ಠ. ಅದರ ಜನಗಳು ಮಾನವರಲ್ಲಿ ಅತ್ಯಂತ ಶ್ರೇಷ್ಠರು. ಅವರು ಆಯ್ದಿರುವ ಪ್ರಜಾಪ್ರಭುತ್ವವು ಅತ್ಯಂತ ಶ್ರೇಷ್ಠ ರಾಜ್ಯಾಡಳಿತ ಪದ್ಧತಿ. ಜನಪ್ರತಿನಿಧಿಗಳು ಈಜನಗಳನಾಯಕರುಗಳು. ಹೀಗಿದ್ದೂ ಏಕೆಇಂತಹದುಸ್ಥಿತಿಬಂದಿದೆ? ನಾಯಕರುಗಳು ಹೇಳುತ್ತಾರೆ-ಇದೇಸುಸ್ಥಿತಿಎಂದು. ಜನಗಳುಬಾಯಿಬಿಡಿಸಿಕೊಂಡುಸುಮ್ಮನಾಗುತ್ತಾರೆ. ಅದ್ವೈತವೇ ಮೊದಲಾದ ಶ್ರೇಷ್ಠದರ್ಶನಗಳನ್ನು ತ್ಯಜಿಸಿ, ಚುನಾವಣೆಯ ಹಿಂದಿನ ಸಂಜೆ ಎಕ್ಸಿಸ್ಟೆನ್ಷಿಯಲಿಸಂ ಅನ್ನು ಅವಲಂಬಿಸುತ್ತಾರೆ. ಏಕೆ ಹೀಗೆ?

ನನಗೆ ಈಗ ಸ್ಪಷ್ಟವಾಗಿದೆ; ನಮ್ಮ ಕಾರ್ಯಾಂಗಗಳು ನ್ಯಾಯಾಂಗಗಳು ಕೆಲಸ ಮಾಡುವ ಭವನಗಳಿಗೆ ವಾಸ್ತು ಶುದ್ಧಿಯಿದೆಯೇ? ಇಂಗ್ಲೀಷರು, ಪಾಪ, ದೇಶವನ್ನು ಕೊಳ್ಳೆ ಹೊಡೆಯಲು ಬಂದವರು. ನಮ್ಮವರ ಹಾಗೆ ಕೊಳ್ಳೆ ಹೊಡೆಯಲು ಬಂದವರಲ್ಲ; ಪರದೇಶಿಗಳನ್ನು ಅನಾಥರಾಗಿ ಮಾಡಲು ಬಂದವರು. ಅನಾಥರಾಗಿದ್ದವರು ಅನಾಥರನ್ನು ತಲೆಹೊಡೆಯಲು ಬಂದವರಲ್ಲ. ಅವರು ವಾಸ್ತುಶಿಲ್ಪವನ್ನು ಬಲ್ಲವರಲ್ಲ. ಈಗಲಾದರೋ ಬರಿಯ ಅನುಕರಣೆ ಮಾಡುವವರು. ನಮ್ಮದಲ್ಲದ ಪರರ ತಲೆಬುಡವಿಲ್ಲದ ಹಳೆಯ ಸೆಕೆಂಡ್‌ಹ್ಯಾಂಡ್ ತಿಳುವಳಿಕೆಯನ್ನು.

ಆದ್ದರಿಂದ ನಾವೀಗ ಏನು ಮಾಡಬೇಕು? ಶಾಸಕಾಂಗ ಭವನವನ್ನು ಹೊಸದಾಗಿ

ಕಟ್ಟಿಸಲು ಆಗುವುದಿಲ್ಲ. ಏಕೆಂದರೆ ಅದನ್ನು ಮಲ್ಟಿನ್ಯಾಷನಲ್ ಕಂಪನಿಗಳಿಗೇ ಗುತ್ತಿಗೆ ಕೊಡಬೇಕಾಗುತ್ತದೆ. ಅವರಿಗೆ ವಾಸ್ತುಶಾಸ್ತ್ರ ಗೊತ್ತಿಲ್ಲ. ಕಾಕಾಯವನ್ನಿಟ್ಟರೆ ಆಗ ಏನು ಮಾಡಬೇಕು? ಹೀಗಾಗಿ ಇದು ಬಗೆಹರಿಸಲಾಗದ ಸಮಸ್ಯೆ''.

ನಾನು ಹೇಳಿದೆ : ಸೌಲೀ, ಕೇಳು, ಬಗೆಹರಿಸಲು ಆಗುವುದೇ ಸಮಸ್ಯೆ. ಆದ್ದರಿಂದ ಪರಿಹಾರ ಇದ್ದೇ ಇದೆ. ಇಲ್ಲದಿದ್ದರೆ ಪಿಲಿಪಿಂಛ, ಭಲ್ಲಾಟ, ಅವವತ್ಸ ದೌವಾರಿಕ, ಕುಲಿಶಕೃತ್ ಮೊದಲಾದ ದೇವತೆಗಳು ಅತೃಪ್ತರಾಗಿ ಅದರಿಂದ ದೇಶದಲ್ಲಿ ಕ್ಷಾಮ, ಡಾಮರ, ತಲೆತಲೆ ಪಟ್ಟೇಗಾರಿಕೆ, ಭಯೋತ್ಪಾದನೆಗಳು ಕೈಮೀರುತ್ತವೆ.

ಸೌಲಭ್ಯ ಕೇಳಿದಳು : ದೇವತೆಗಳು ಹೇಗೆ ಕೆಟ್ಟದ್ದನ್ನು ಮಾಡಲು ಸಾಧ್ಯ.

ನಾನು ಹೇಳಿದೆ : ಅವರ್‍ಯಾಕೆ ಕೆಟ್ಟದ್ದನ್ನು ಮಾಡಲು ಹೋಗುತ್ತಾರೆ. ಅವರು ವಾಸ್ತುಪುರುಷನನ್ನು ಮೆಟ್ಟಿ ನಿಂತಿರುತ್ತಾರೆ. ಇವರು ಹೇಳಿದ್ದಕ್ಕೆಲ್ಲಾ ವಾಸ್ತು ಪುರುಷ ತಥಾಸ್ತು ಅನ್ನುತ್ತಿರುತ್ತಾರೆ.

ಸೌಲಭ್ಯ ಹೇಳಿದಳು : ನೀನು ಹೇಳುವುದು ನಿಜ. ಈಗ ಹೊಸದಾಗಿ ಕಟ್ಟಡ ಕಟ್ಟಿದರೆ ಹಣವೆಲ್ಲಾ ಮೊದಲಿನಂತೆಯೇ ಪರದೇಶಕ್ಕೆ ಹೋಗುತ್ತದೆ. ವಾಸ್ತುವನ್ನು ಕಡೆಗಣಿಸಿದವರು ಲಾಭದ ಮೇಲೆ ಲಾಭವನ್ನು ಪಡೆಯುತ್ತಾರೆ. ಆದುದರಿಂದ ಪಾಪಕ್ಕೆ ಪ್ರಾಯಶ್ಚಿತ್ತ ಅನ್ನುತ್ತಾರಲ್ಲ. ಹಾಗೆ ನಾವು ದೇಶದ ಕಾರ್ಯಾಂಗ, ಶಾಸಕಾಂಗಗಳ ಕಟ್ಟಡಗಳಲ್ಲೆಲ್ಲಾ ವಾಸ್ತುಶಾಂತಿಯನ್ನು ಮಾಡಿಸಬೇಕು. ಇದು ಸ್ವಾರ್ಥಮೂಲವಾದ ಇಂದಿನ ಇಂಡಿಯದ ಪರಿಸ್ಥಿತಿಯಲ್ಲಿ ವ್ಯರ್ಥಾಲಾಪ.

ಆದುದರಿಂದ ನಾವು ಹೊಸದೊಂದು ರಾಜಕೀಯ ಪಕ್ಷವನ್ನೇ ಕಟ್ಟಬೇಕು. ಮುಂಬರುವ ಚುನಾವಣೆಯಲ್ಲಿ ಈ ವಾಸ್ತುಪಕ್ಷ ಮೂರನೇ ಎರಡು ಬಹುಮತವನ್ನು ಗಳಿಸಬೇಕು. ತಕ್ಕ ರಾಜ್ಯಾಂಗ ತಿದ್ದುಪಡಿಯನ್ನು ತಂದು ವಾಸ್ತುಶಾಂತಿಯನ್ನು ಮಾಡಿಸಲೇಬೇಕು. ಇಷ್ಟೆಲ್ಲಾ ಮಾತುಕತೆಗಳನ್ನು ನಡೆಸುತ್ತಿದ್ದಾಗ ಅವಳು ಡಾರ್ಲಿಂಗನ್ನು ಮತ್ತೆ ತರಲಿಲ್ಲ. ಇದರಿಂದ ನನ್ನ ಆಶಾಸೌಧ ತಲೆಯೆತ್ತಿತ್ತು.

ನನ್ನ ಕರ್ತವ್ಯ ಎಲ್ಲಿಯೋ ಮರೆತುಹೋಗಿ ರಾಷ್ಟ್ರದ ಹಿತರಕ್ಷಣೆಯಲ್ಲಿ ಇಬ್ಬರೂ ಮಗ್ನರಾಗಿದ್ದೆವು. ಯಾರೋ ನಕ್ಕ ಹಾಗಾಗಿ ಬಾಗಿಲ ಕಡೆಗೆ ನೋಡಿದಾಗ ರಂಗಣ್ಣ ಕಂಡ. ನಮಗೆ ಕಾಫಿ ತಿಂಡಿ ಏನಾದರೂ ಬೇಕೇ ಬೇಡವೇ? ಚರ್ಚೆ ಇನ್ನೆಷ್ಟು ಕಾಲ ನಡೆಯುತ್ತದೆ? ಚರ್ಚೆಯ ವಿಷಯವೇನು? ಇತ್ಯಾದಿಯಾಗಿ ಪ್ರಶ್ನೆ ಕೇಳಿದ. ಕಾಫಿ ಕಳಿಸಲು ಹೇಳಿದೆ. ಅವನು ಹೊರಟುಹೋದ.

ಸೌಲಭ್ಯನ ಹೊಸಮನೆಗೆ ಯಾವ ಆಯ ಇಡಬೇಕು? ಯಾವ ಮಾಸ, ಯಾವ ತಿಥಿ, ಯಾವ ಪಕ್ಷ, ಯಾವ ಲಗ್ನ ಎಂದು ಪ್ರಸ್ತಾಪ ಮಾಡಿದೆ.

ಮನೆಯ ಕೆಲಸ ಪೂರ್ತಿಯಾಗದೆ ತಾನು ಲಗ್ನವಾಗುವುದಿಲ್ಲವೆಂದು ಅವಳು ಹೇಳಿದಳು. ಆ ಲಗ್ನವೇ ಬೇರೆ ನಾನು ಹೇಳಿದ ಲಗ್ನವೇ ಬೇರೆ ಎಂದರೆ ಅವಳು ಒಪ್ಪಲಿಲ್ಲ.

ಲಗ್ನವೊಂದು ಜೀವಮಾನದಲ್ಲಿ ಒಂದೇ. ಆದುದರಿಂದ ಮನೆ ಕಟ್ಟಿಸಿದ ಮೇಲೇ ಲಗ್ನವಾಗುವುದು ತನ್ನ ದೃಢನಿಶ್ಚಯವೆಂದು ಹೇಳಿದಳು.

ಅಷ್ಟರಲ್ಲಿ ಅಮ್ಮ ಬಂದು ನನ್ನನ್ನು ವಾಚಾಮಗೋಚರವಾಗಿ ಬೈದು, ಸೌಲಭ್ಯನನ್ನು ಎಳೆದುಕೊಂಡು ಹೋದಳು. ಹೋಗುತ್ತಾ ಅವಳು ಹೇಳಿದ ಮಾತು ಕಿವಿಗೆ ಅಲ್ಪಸ್ವಲ್ಪ ಕೇಳಿದವು.

''ಹಿರಿಯರಿಗೆ ಗೊತ್ತಿಲ್ಲದಂತೆ, ಹೋಟೆಲು, ತರಕಾರಿ ಕೋಣೆಯಲ್ಲಿ ಲಗ್ನದ ಸುದ್ದಿ ಆಡುತ್ತೀಯಲ್ಲಾ. ನಿನಗೇನಾದರೂ ಬುದ್ಧಿ ಇದೆಯೇ? ಹುಡುಗಿಯರು ಹೀಗೆಲ್ಲಾ ಹದ್ದು ಮೀರಬಾರದು. ನಿಮ್ಮ ಅಪ್ಪ ಅಮ್ಮ ಇಲ್ಲವೇ?....''

ಅಷ್ಟರಲ್ಲಿ ನಮ್ಮ ಎಂ.ಡಿ. ರಂಗಣ್ಣನ ತರಕಾರಿ ರೂಮಿಗೆ ಮರಳುಗಾಡಿನ ಬಿರುಗಾಳಿಯಂತೆನುಗ್ಗಿದರು. ''ಯಾಕೆ ಅಳ್ತಾ ಅದಳೇ ಆ ಹುಡ್ಗಿ? ಯಾರವಳು? ಏನಂತೆ ನೀನು? ಹುಡ್ಗೀರ್ನ ಅಳಸಕ್ಕೇನು ನಿನಗೆ ಸಂಬಳ ಕೊಡದು? ಆಫೀಸಿಗೆ ಯಾಕೆ ಬರಲಿಲ್ಲ? ನಿನ್ನ ಹುಡ್ಕೊಂಡು ನಾನು ಬರ್‍ಬ್ಕೇನು?'' ಎಂದು ಗರ್ಜಿಸಿದರು.

ನಾನು ''ಸಾ, ನೀವು ಬೊಂಬಾಯಿಗೆ ಹೋಗಿದ್ರೆಲ್ಲಾ ಯಾವಾಗ ಬಂದ್ರಿ? ನೀವು ಹೇಳ್ಕಳ್ಸಿದ್ರೆ ಬರ್‍ತಿದ್ದೆ? ಅವಳು ನನ್ನ ಕ್ಲಾಸ್‌ಮೇಟು ಸೌಲಭ್ಯ ಅಂತ. ನೀವು ಹೇಳಿದ್ರಿ ಅಂತ ಅವ್ರಪ್ಪ ನನ್ನ ಹತ್ರಕ್ಕೆ ಕಳ್ಸಿದ್ದ. ನಮ್ಮ ಅಮ್ಮ, ನೀವು ನುಗ್ಗಿದ್ರೆಲ್ಲಾ ಹಂಗೇ ಬಂದು ಏನೇನೋ ಅಂದ್ಲು. ಅವ್ಳೇನು ಅತ್ತಿಲ್ಲ'' ಎಂದೆ.

ಎಂ. ಡಿ. ಅರಚಿದರು ''ನಾನು ಬೊಂಬಾಯಿಗೆ ಹೋಗಿದ್ನೋ ಬುರ್‍ಕಿನೋಫಾಸೋಗೆ ಹೋಗಿದ್ದೆನೋ ಕಟ್ಕೊಂಡು ನಿನ್ಗೇನು? ನಾನಾಡಿದ ಮಾತು ಕೇಳ್ಕೊಂಡು ಕವಲೂರ ನಿದ್ದನ್ಹಂಗೆ ಅವ್ಳ್ಯಾಕೆ ಬಂದ್ಳು? ಏನು ಮಾತಾಡಿದ್ರಿ? ಎಷ್ಟೊತ್ತು?''.

ನಾನು ತಲೆತುರಿಸಿಕೊಂಡು ''ಅವ್ಳ ಸುದ್ದಿ ಕಟ್ಕೊಂಡು ನನ್ಗೇನಿಲ್ಲ. ಅವಳನ್ನ ಬಾ ಅಂತ ಕರೀಲಿಲ್ಲ. ಅವಳು ಬಂದ್ಳು ಅಷ್ಟೆ. ಈ ಶಾಸಕಾಂಗ ಸಭೆಗಳ ಕಟ್ಟಡಗಳಿಗೆ ವಾಸ್ತುಶಾಂತಿ ಮಾಡ್ಸೋದಿಕ್ಕೆ ಒಂದು ರಾಜಕೀಯ ಪಕ್ಷ ಕಟ್ಟಣ ಅಂತ ಮಾಡಿದ್ವಿ''.

ಎಂ. ಡಿ. ತಲೆ ತಿರುವಿದರು. ''ಅಲ್ಲಲೇ ಅಷ್ಟು ತಿಳಿಯಲ್ಲೇ? ನಿಂಗೆಷ್ಟು ವರ್ಸ? ಹುಡ್ಗಿ ಹತ್ರ ರಾಜಕೀಯ ಮಾತಾಡ್ದೆ ಅಂದೆಲ್ಲಾ, ಉದ್ಧಾರಾತು'' ಎಂದರು.

★★★



''ಕ್ರಿಕೆಟ್ ಮೇಲೆ ಬೆಟ್ಟಿಂಗ್ ಶುರು ಆದ್ಮೇಲೆ ನಮ್ಮನ್ನ ಕೇಳೋರೆ ಇಲ್ಲ ಕಣೇ!''

ಶುಭಾಶಯಗಳೊಂದಿಗೆ

# ಮಾಸ್‌ಕಾಟ್ ಆಗ್ರೋ ಕೆಮಿಕಲ್ಸ್ ಪ್ರೈವೇಟ್ ಲಿಮಿಟೆಡ್

**93, 3ನೇ ಘಟ್ಟ**
**ಪೀಣ್ಯ ಇಂಡಸ್ಟ್ರಿಯಲ್ ಏರಿಯ,**
**ಬೆಂಗಳೂರು - 560 058**
**ದೂರವಾಣಿ: 395902 ತಂತಿ: ಮಾಸ್‌ಕಾಟ್**
**ಟೆಲೆಕ್ಸ್ : 845 580**

ಭತ್ತ, ಕಬ್ಬು ಮತ್ತು ಗೋಧಿಯ ಬೆಳೆಗಳಲ್ಲಿ
ಕಳೆ ನಿಯಂತ್ರಣ ಮಾಡುವುದಕ್ಕೆ
"ನಾಕ್ವೀಡ್" ಕಳೆನಾಶಕವನ್ನು ಉಪಯೋಗಿಸಿರಿ.

# ಅಶ್ವ ಶಕ್ತಿ

**ಕುಮುದಾ ಪುರುಷೋತ್ತಮ್**

ಚಾಮರಾಜ ಪೇಟೆಯಿಂದ ಸಿಟಿ ರೈಲ್ವೇ ಸ್ಟೇಷನ್ ರಸ್ತೆಯ ಮೂಲಕ ಮಲ್ಲೇಶ್ವರದ ಕಡೆಗೆ ನೀವು ಯಾವಾಗಲಾದರೂ ಆಟೋವಿನಲ್ಲಿ ಪ್ರಯಾಣಿಸಿದ್ದೀರಾ? ಪ್ರಯಾಣಿಸಿದ್ದರೆ ನನಗಾದಂತೆ ಕಣ್ಣುಮೂಗುರಿತ ಉಂಟಾಗಿ ಕಣ್ಣು ಮೂಗಿನಲ್ಲಿ ಜಲಧಾರೆ ಹೊರಬೀಳುವುದು ಖಂಡಿತ. ಎಲ್ಲವೂ ಕವಿದಿರುವ ವಾಯುಮಾಲಿನ್ಯದ ಕೃಪೆ. ನನ್ನ ಪಾಡನ್ನು ನೋಡಿದ ಆಟೋ ಚಾಲಕ ಒಂದು ಬಗೆಯಾಗಿ ನಕ್ಕ. ''ಒಂದು ದಿನಕ್ಕೇ ನೀವು ಹೀಗೆ ಕಷ್ಟ ಪಡ್ತೀರಿ ಮೇಡಂ. ನಾವು ದಿನಾ ಇದೇ ದಾರೀಲಿ ಓಡಾಡ್ತಾನೇ ಇರ್ತೀವಿ. ನಮ್ಮ ಪಾಡು ಆ ದೇವ್ರಿಗೆ ಗೊತ್ತು. ರಾತ್ರಿಯಾದರೆ ಕೆಮ್ಮು, ಉಸಿರಾಡಲು ಕಷ್ಟ'' ಹೇಳುತ್ತಾ ಸಿಗರೇಟ್ ಹಚ್ಚಿದ! ಹಿಂದೆ ಬಗ್ಗಿ ನೋಡಿದೆ. ಆಟೋವಿನ ಹೊಗೆ ಕೊಳವೆ ದಟ್ಟವಾದ ಕಪ್ಪು ಹೊಗೆ ಉಗುಳುತ್ತಾ ಸುತ್ತಲ ವಾಯು ಮಾಲಿನ್ಯಕ್ಕೆ ತನ್ನ ಅಳಿಲು ಸೇವೆ ಸಲ್ಲಿಸುತ್ತಿತ್ತು.

ನನ್ನ ಮನೆಯಾಕೆ ರದ್ದೀವಾಲನಮುಂದೆ ಕುಳಿತು ಹಳೆಯ ಪೇಪರಿನ ರಾಶಿಯನ್ನು ತೂಗಿಸುತ್ತಿದ್ದಳು. ಮಾಮೂಲಿನಂತೆ ಚೌಕಾಶಿ ನಡೆಯುತ್ತಿತ್ತು. ಈಕೆ ಕೇಳಿದ ಬೆಲೆ ಅವ ಕೊಡ ಇವಳು ಬಿಡ. ತೂಕ ಸರಿಯಾಗಿಲ್ಲವೆಂದು ಇವಳು ತಕರಾರು ಎತ್ತಿದಳು. ಒಂದೆರಡು ಪೇಪರ್ ಇವಳು ಎತ್ತಿಟ್ಟುಕೊಂಡಳು. ಎಂದೋ ಓದಿದ್ದ ಪೇಪರನ್ನು ಮತ್ತೊಮ್ಮೆ ಎತ್ತಿ ಓದತೊಡಗಿದೆ, ವಾಗ್ವಾದದಲ್ಲಿ ತಲೆಹಾಕಲಿಚ್ಛಿಸದೆ. ತಲೆಬರಹ ನನ್ನನ್ನಾಕರ್ಷಿಸಿತು. ಪ್ರಧಾನಿಯವರ ತುರ್ಕಮೆನಿಸ್ತಾನ್ ಪ್ರವಾಸ - ಅಲ್ಲಿನ ಜಗತ್ಪ್ರಸಿದ್ಧ ಅಶ್ವದ ಕೊಡುಗೆ. ಅತಿಥಿಗಳಿಗೆ ಅಶ್ವದ ಕೊಡುಗೆ ನೀಡುವುದು ಅಲ್ಲಿಯ ರಾಷ್ಟ್ರೀಯ ಪರಂಪರೆಯಂತೆ! ಅಶ್ವದಾನ ಸಮಾರಂಭದಲ್ಲಿ ಕುದುರೆಯನ್ನು ಪ್ರಧಾನಿಯವರ ಮುಂದೆ ಕರೆತಂದರಂತೆ. ಸಂಚಾಲಕರಲ್ಲೊಬ್ಬ ಕುದುರೆಯ ಲಕ್ಷಣ, ಅದರ ವಂಶವೃಕ್ಷ, ಜಾತಕವನ್ನೆಲ್ಲಾ ಹೇಳಿದನಂತೆ. ನಂತರ ಕುದುರೆಯ ಲಗಾಮನ್ನು ಸಾಂಕೇತಿಕವಾಗಿ ಪ್ರಧಾನಿಯವರ ಕೈಗೆ ನೀಡಲಾಯಿತಂತೆ.

ಅಲ್ಲಾ ನಮ್ಮ ಪ್ರಧಾನಿಯವರಿಗೆ ಅಶ್ವದಾನ ನೀಡುತ್ತಾರೆಂಬ ಸುಳಿವು ಮೊದಲೇ ತಿಳಿದಿತ್ತೆ? ಹಾಗಿಲ್ಲದೆ ಏಕಾಏಕಿ ಅಶ್ವ ಕೊಡುಗೆಯಾಗಿ ಬಂದು ಬಿಟ್ಟಿದ್ದರೆ ಅದರ ಯೋಗಕ್ಷೇಮ ನೋಡಿಕೊಳ್ಳಲು, ಹೊತ್ತು ಹೊತ್ತಿಗೆ ಮೇವು ನೀರು ಕೊಡಲು, ಶೌಚ ಕಾರ್ಯದ ಉಸ್ತುವಾರಿಗೆ ಯಾರನ್ನು ನೇಮಿಸಿಯಾರು? ಜೊತೆಗೊಯ್ದ ತಂಡದ ಅಧಿಕಾರಿಯೊಬ್ಬರನ್ನೇ ಅಥವಾ ನಿಪುಣರಲ್ಲೊಬ್ಬರನ್ನೇ ಎರವಲು ಪಡೆದರೇ? ಈ ಅಶ್ವ ಪ್ರಧಾನಿಯವರ ವಿಮಾನದಲ್ಲೇ ಇಲ್ಲಿಗೆ ಬಂದಿತೇ? ನವದೆಹಲಿ ತಲುಪಿ ಪ್ರಧಾನಿಯವರು ವಿಮಾನವಿಳಿದು ನಡೆದು ಬಂದಾಗ ತಾನೂ ಹಿಂದೆ ಬಂದು ಅವರಿಗೆ ದೊರಕಿದ ಸ್ವಾಗತದ ಪರಿಕಂಡು ಹಿಗ್ಗಿ ಮುಂಗಾಲು ಮೇಲೆತ್ತಿ ಹೇಷಾರವ ಮಾಡಿತೇ? ನನಗಂತೂ ಏನೇನೋ ಆಲೋಚನೆಗಳು. ಕಲ್ಪನಾಲಹರಿ ಲಗಾಮಿಲ್ಲದ ಹುಚ್ಚು

ಕುದುರೆಯನ್ನೇರಿ ಸಂಚಾರ ಹೊರಟಿತು.

ಮರುದಿನದಿಂದ ಪ್ರಧಾನಿಯವರು ಆ ಕುದುರೆ ಏರಿ ಕಛೇರಿಗೆ ಬರುವರೇ? ನಮ್ಮ ಮಂದಿ ಹೇಳಿಕೇಳಿ ಭಟ್ಟಂಗಿಗಳು ಇತರೇ ಅಧಿಕಾರಿಗಳು ಹಾಗೂ ಮಂತ್ರಿಗಳು ತಾವೂ ಸರ್ಕಾರಿ ಖರ್ಚಿನಲ್ಲಿ ಕುದುರೆಗಳ ಖರೀದಿಸಿ ಕಛೇರಿಗೆ ಸವಾರಿ ಮಾಡಿಯೇ ಮಾಡುತ್ತಾರೆ. ಈ ಖಯಾಲಿ ಎಲ್ಲೆಡೆ ಹರಡಿ ಕ್ರಮೇಣ ಸ್ಕೂಟರಿನವರು ಒಂಟಿ ಕುದುರೆ ಸವಾರರಾದರೆ ಕಾರಿನ ಒಡೆಯರು ಸಾರೋಟಿನ ಸಾರಥ್ಯ ವಹಿಸಿಬಿಡುತ್ತಾರು! ದೇಶಕ್ಕೆ ಪೆಟ್ರೋಲಿನ ಉಳಿತಾಯವೇ ಉಳಿತಾಯ. ಈಗಿನ ಶಬ್ದ, ವಾಯು ಮಾಲಿನ್ಯಕ್ಕೆ ವಿರಾಮ ದೊರೆತು ಎಲ್ಲರಿಗೂ ಶುದ್ಧ ಹವೆ ದೊರೆತು ನೆಗಡಿ, ಕೆಮ್ಮಲು, ಉಬ್ಬಸ ಪಲಾಯನಗೈದು ಡಾಕ್ಟರುಗಳಿಗೆ ಎಷ್ಟೋ ವಿಶ್ರಾಂತಿ ಪೋಂ .... ಪೋಂ....ಕೀಂ..... ಕೀಂ..... ಹಾರನ್‌ಗಳಿಲ್ಲದೆ ಶಬ್ದ ಮಾಲಿನ್ಯದಲ್ಲೂ ಕಡಿತ. ಕುದುರೆಗಳ ಖರಪುಟ ಧ್ವನಿ, ಹೇ.....ಹೇ....ಬಾಜೂ.... ಇತ್ಯಾದಿಗಳ ಇಂಪಾದ ಉಲಿ. ಈಗಿನ ವೇಗ, ಅವಸರ ಮತ್ತು ಅಪಘಾತದ ಭಯ ನಾಸ್ತಿ, ರಕ್ತದೊತ್ತಡ, ಹೃದಯಾಘಾತ ಮುಂತಾದವುಗಳಿಗೆ ಅಲ್ಪ ವಿರಾಮವಾದರೂ ಆದೀತು. ಹಾಗಾದಾಗ ಜೀವನ ಎಷ್ಟು ಸುಂದರ!

'ಪ್ರಗತಿ' ಎಂದೊಡನೆ ಮುಂದೆ ನುಗ್ಗುವುದು ಎಂದೇ ಸಾಮಾನ್ಯ ಭಾವನೆ. ಒಮ್ಮೊಮ್ಮೆ ಹಿಂದಿರುಗಿ ಹೋಗುವುದೂ ಪ್ರಗತಿಯ ಅಂಶ ಏಕಾಗಬಾರದು? ಮುಂದೆ ಚಲಿಸುತ್ತಿರುವ ಕಾರು ರಸ್ತೆಯಲ್ಲಿ ಅಡೆ ತಡೆ, ಅಂಕು ಡೊಂಕಿದ್ದರೆ ರಿವರ್ಸ್ ಮಾಡಿಕೊಂಡು ಹಿಂದಕ್ಕೆ ಸಾಗುವುದಿಲ್ಲವೇ. ಹಾಗೆಯೇ ಮಾಲಿನ್ಯ ತಡೆಯಲು ಸಾರಿಗೆ ವ್ಯವಸ್ಥೆಯೂ ಮೋಟರಿನಿಂದ ಅಶ್ವದ ಬಳಕೆಗೆ ಹಿಂದಿರುಗಿ ನಿಜವಾದ ಪ್ರಗತಿ ಸಾಧಿಸಬಹುದಲ್ಲವೆ?

ನನ್ನೂರು ಚಿಕ್ಕದು. (ಈಗ ಅದೂ ಅಡ್ಡಾದಿಡ್ಡಿಯಾಗಿ ಅಂಚನ್ನು ಒಡೆದುಕೊಂಡು ಹೊರಬರುವಂತೆ ಬೆಳೆದಿದೆ ಎನ್ನಿ!) ಅದು ಆಟೋ, ಸಿಟಿಬಸ್ ಮುಂತಾದ ಯಾವುದೇ ಸಾರಿಗೆ ವ್ಯವಸ್ಥೆ ಇಲ್ಲದಿದ್ದ ಕಾಲ. ಶಾಲಾ ಕಾಲೇಜಿಗೆ ಮೈಲುಗಟ್ಟಲೆ ನಡೆದೇ ಹೋಗಬೇಕಿತ್ತು. ಅದೊಂದು ಶ್ರಮದಾಯಕ ಅಥವಾ ಅನಾನುಕೂಲ ಎನ್ನಿಸಿದ್ದೇ ಇಲ್ಲ. ಮನೆ ಮಂದಿ ಎಲ್ಲಾ ಹೊರ ಹೋಗಬೇಕಾದಾಗ ಇದ್ದ ಏಕೈಕ ಸಾಧನ ಜಟಕಾ ಗಾಡಿ. ಶಂಕ್ರಪ್ಪನಿಗೆ ಮೊದಲೇ ಹೇಳಿಬಿಟ್ಟಿದ್ದರೆ ತೀರಿತು. ಸಮಯಕ್ಕೆ ಸರಿಯಾಗಿ ತನ್ನ ಜಟಕಾವಿನೊಡನೆ ಹಾಜರಾಗುತ್ತಿದ್ದ. ನಮಗಾಗಿ ಕಾಯುವ ವೇಳೆಯನ್ನು ವ್ಯರ್ಥ ಮಾಡದೆ ಕುದುರೆಗೆ ಮಾಲಿಷ್ ಮಾಡುತ್ತಾ ಜೊತೆಗೆ ಸಂಭಾಷಣೆಯನ್ನು ನಡೆಸುತ್ತಿದ್ದ. ಜಟಕಾವಿನ ವರಟು ಹಲಿಗೆಯ ಮೇಲೆ ಹಸಿರು ಹುಲ್ಲು ಹರಡಿ ಮೇಲೆ ಗೋಣಿಪಟ್ಟೆಯಿಂದ ಮುಚ್ಚಿದರೆ ಅದೇ ನಾವು ಕೂಡುವ ಮೆತ್ತೆ ಆಸನ. ನಮ್ಮ ಹೊರಸಂಚಾರ ಸಾಕಷ್ಟು ದೀರ್ಘವಾಯಿತೆಂದರೆ ಅಲ್ಲಲ್ಲಿ ಹುಲ್ಲು ಸ್ವಲ್ಪವೇ ಕುದುರೆಯ ಜಠರ ಸೇರಿ ಬರೀ ಗೋಣಿ ಪಟ್ಟೆ ಉಳಿದು ಮನೆ ತಲುಪುವುದರಲ್ಲಿ ಮೈಕೈ ನೋವಾಗಿ ಉಸ್ಸಪ್ಪಾ ಎನ್ನುತ್ತಿದ್ದೆವು. ಇಷ್ಟಾಗಿಯೂ ಜಟಕಾವಿನಲ್ಲಿ ನಮ್ಮಿಷ್ಟದಂತೆ ಕುಳ್ಳಿರುವಂತೆಯೂ ಇರಲಿಲ್ಲ. ಎಲ್ಲಾ ಶಂಕ್ರಪ್ಪನ ಆದೇಶದಂತೆಯೇ ನಡೆಯುತ್ತಿತ್ತು

''ಮುಂಭಾರವಾಯ್ತು ಹಿಂದಕ್ಕೆ ಸರ್ರೊಳ್ಳಿ'' ಎಂದೋ ''ಹಿಂಬಾರವಾಯ್ತು, ಮುಂದೆ ಬನ್ನಿ'' ಎಂದೋ ಆದೇಶ ನೀಡುತ್ತಾ ನಮ್ಮನ್ನು ಅಲ್ಲಾಡಿಸಿಬಿಡುತ್ತಿದ್ದ. ಈ ಮಧ್ಯೆ ಸ್ಥಾವರವಾಗಿ ಕುಳಿತ ಹಿರಿಯರು ಚಲಿಸುವ ಶ್ರಮಕ್ಕೆ ಹೋಗದೆ ನಮ್ಮಂತಹ ಚಿಳ್ಳೆ ಪಿಳ್ಳೆಗಳನ್ನು ಮುಂದಕ್ಕೂ ಹಿಂದಕ್ಕೂ ಓಲಾಡಿಸುತ್ತಾ ಬಂಡಿಯ ಸಮತೋಲನಕ್ಕೆ ಸಹಕಾರ ನೀಡುತ್ತಿದ್ದರು.

ಅಂದಿನ ಜಟಕಾ ಯುಗದಲ್ಲಿ ಅಪಘಾತಗಳು ಎಲ್ಲೋ ಅಲ್ಲೊಂದಿಲ್ಲೊಂದು ಇದ್ದು ಚಿಕ್ಕ ಪುಟ್ಟ ಗಾಯಗಳೇ ಹೊರತು ಮಾರಕವಾದದ್ದು ಅಪರೂಪ. ಒಮ್ಮೆ ನಮ್ಮ ಜಟಕಾ ಯಾತ್ರೆಯಾಗುತ್ತಿದ್ದಾಗ ಶಂಕ್ರಪ್ಪನ ಕುದುರೆ ಒಮ್ಮೆಗೇ ಮುಷ್ಕರಹೂಡಿ ರಸ್ತೆಯ ಮಧ್ಯದಲ್ಲೇ ಕುಕ್ಕರಿಸಿಬಿಟ್ಟಿತು. ಒಳಗೆ ಕುಳಿತ ನಾವೆಲ್ಲಾ ಜಾರು ಬಂಡೆಯಂತೆ ಜಾರಿ ಕುದುರೆ ಮೇಲೆ ಬಿದ್ದು ಸವಾರಿ ಮಾಡಿದೆವು. ನಮ್ಮ ಲಬೋ ಲಬೋ ಕೇಳಿ ಓಡಾಡುತ್ತಿದ್ದವರು ಓಡಿ ಬಂದು ಮೇಲೆಬ್ಬಿಸಿದರು. ಭಯ ಗಾಭರಿಯ ವಿನಹ ನಮ್ಮ ಮೈಕೈ ಗಟ್ಟಿಯಾಗಿಯೇ ಇತ್ತು.

ಮೋಟರ್ ಯುಗ ಹೋಗಿ ಮತ್ತೆ ಅಶ್ವಯುಗವೇ ಬಂದರೆ ಅದೊಂದು ಸ್ವರ್ಣಯುಗವೇ ಆದೀತೇನೋ. ಟ್ರಾಫಿಕ್ ಸಿಗ್ನಲ್‌ಗಳ ಅವಶ್ಯಕತೆ ಇಲ್ಲ, ವಾಹನ ನಿಯಂತ್ರಣ ಪೋಲೀಸ್ ಪಡೆಗೆ ದೀರ್ಘ ವಿಶ್ರಾಂತಿ, ಆಫೀಸ್ ಶಾಲಾ ವೇಳೆಯಲ್ಲಿ ಉಂಟಾಗುವ ಟ್ರಾಫಿಕ್ ಜ್ಯಾಮ್‌ನ ಭಯವಿಲ್ಲ, ಅಪಘಾತಗಳಿಂದ ಸಾವು ನೋವಿನ ಭಯವಂತೂ ಇಲ್ಲವೇ ಇಲ್ಲ. ಮೋಟರ್ ಉತ್ಪಾದನಾ ಕಾರ್ಖಾನೆಯ ಬದಲಿಗೆ ಉತ್ತಮ ತಳಿಯ ಅಶ್ವ ಸಂಗೋಪನಾ ಸಂಸ್ಥೆಗಳು, ಪೆಟ್ರೋಲ್ ಬಂಕ್‌ಗಳ ಬದಲು ಹುಲ್ಲು ನೀರುಣಿಸುವ ಕೇಂದ್ರಗಳು, ಈಗಿನ ವಾಹನ ಪಾರ್ಕಿಂಗ್ ಸ್ಥಳಗಳಲ್ಲಿ ಕುದುರೆ ಕಟ್ಟಿಹಾಕುವ ಗೂಟಗಳು, ಮೋಟರ್ ಮೆಕ್ಯಾನಿಕ್ ಅಂಗಡಿಗಳ ಬದಲು ಪಶುವೈದ್ಯ ದವಾಖಾನೆಗಳು. ಇದು ಹಳೆಯ ಜೀವನ ಕ್ರಮದ ಪುನರಾರಂಭ. ಮಗಳ ಮದುವೆಗೆ ಅಳಿಯದೇವರು ಒಂದೋ ಎರಡೋ ಕುದುರೆಯನ್ನೇ ವರದಕ್ಷಿಣೆಯಾಗಿ ಕೇಳಬಹುದು. ಗೃಹ ನಿರ್ಮಾಣಕ್ಕೆ ತೊಡಗಿದಿರಾದರೆ ಅಶ್ವಕ್ಕಾಗಿ ಸೂಕ್ತ ಲಾಯವೊಂದಿರಲೇಬೇಕು.

ಸುಂದರ ಗುಲಾಬಿಗೆ ಹೊಂದಿಕೊಂಡೇ ಮುಳ್ಳುಗಳಿರುವುದು ಪ್ರಕೃತಿಯ ಧರ್ಮವಷ್ಟೇ. ಅಂತೆಯೇ ಅಶ್ವ ಯುಗವೂ ಸುಖದ ಸುಪ್ಪತ್ತಿಗೆಯೇ ಆಗುವುದಿಲ್ಲ. ಚಿಕ್ಕಪುಟ್ಟ ಕಿರಿಕಿರಿ ಇದ್ದಿದ್ದೇ. ಸ್ವಲ್ಪ ಅಜಾಗರೂಕತೆಯಿಂದಿದ್ದರೆ ಮನೆಯ ಮುಂದಿನ ಹಸಿರು ತೋಟ ನಿಮ್ಮ ಕುದುರೆಯ ಬೆಳಗಿನ ನಾಷ್ಟಾ ಆಗಿಬಿಡಬಹುದು. ನೀವು ನಿಮ್ಮ ಪ್ರಕಾರ ಕುದುರೆಯ ಯೋಗಕ್ಷೇಮ ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದರೂ ಪ್ರಾಣಿದಯಾ ಸಂಘಗಳಿಂದ ಒಂದಿಲ್ಲೊಂದು ಕೊಂಕು ಇದ್ದದ್ದೇ. ಅಶ್ವಕ್ಕೆ ಹೂವು ಮುಡಿಸಲ್ಲ, ಜುಟ್ಟು ಬಿಡಿಸಲ್ಲ ಮೊದಲ್ಗೊಂಡು ಹೆಚ್ಚು ಭಾರ ಹಾಕದಿರಿ, ಚಾವಟಿ ಏಟು ನಿಷೇಧಿಸಿ ಇತ್ಯಾದಿಯನ್ನು ನೀವು ಸಹಿಸಲೇ ಬೇಕು. ಇದೆಲ್ಲಾ ಸಹ್ಯವಾದಾಗ ಅಶ್ವ ಶಕ್ತಿ ಸ್ವಾಗತಾರ್ಹ. ನಾವೇ ಸೃಷ್ಟಿಸಿರುವ ಪರಿಸರ ಮಾಲಿನ್ಯದ ಪರಿಹಾರಕ್ಕೆ ಇದೇ ಮೊದಲ ಹೆಜ್ಜೆ ಹಾಗೆಯೂ ನಿಜವಾದ ಪ್ರಗತಿಗೂ ಕೂಡ.

# ಕೈ ಛಳಕ



ಪ್ರೊಜೆಕ್ಟ್ A-1 ಸಾರ್



ಡಿಟೇಲ್ ಆಗಿ ನೊಡ್ಬೇಕ್ರಿ



ನಿಜವಾಗೂ ಪ್ರಾಫಿಟಬಲ್ ಸಾರ್



ಇಲ್ನೋಡಿ, ಹೊಸಾ ನೋಟುಗಳು



ಆಯ್ತು, ಸ್ಯಾಂಕ್ಷನ್ ಮಾಡಿದೀನಿ, ಹೋಗಿ

# ರೇಖಾ ಸಮಾಜ ಶಾಸ್ತ್ರ












# ''ಕೀಲುಗುರ್ರಂ''

ಶ್ರೀನಿವಾಸ ವೈದ್ಯ (ಶೀನೂ)

ಬೆಳಗು ಮಧ್ಯಾನ್ಹಕ್ಕೆ ತಿರುಗುವ ಸುಮಾರು ಹನ್ನೊಂದು ಗಂಟೆಯ ಸಮಯ. ಆಫೀಸಿನಲ್ಲಿ ನಮ್ಮಂತಹ ಹಿರಿಯ ಅಧಿಕಾರಿಗಳು ಇಷ್ಟೊತ್ತಿಗೆ ಒಂದು ಹಗೂರಾದ ಸಕ್ಕರೆ(ರೋಗ)ದನಿದ್ದೆಯನ್ನು ಮುಗಿಸಿ ಕೆಟ್ಟ ಕಹಿ ಕಾಫಿ ಕುಡಿದು, ಎಂದಿನಂತೆ ಟೈಪಿಷ್ಟನ್ನು ಕರೆದು ಡಿಕ್ಟೇಶನ್ ಹೇಳುತ್ತಾ ಸದರೀ ಟೈಪಿಷ್ಟು ಹೆಣ್ಣಾಗಿದ್ದರೆ ನೇತ್ರಾನಂದವನ್ನನುಭವಿಸುತ್ತಲೋ; ಗಂಡಾಗಿದ್ದರೆ ಸಿಕ್ಕಾಪಟ್ಟೆ ರೇಗುತ್ತಾ ಆತ್ಮಾನಂದವನ್ನನುಭವಿಸುತ್ತಲೋ ಕಾಲ ಕಳೆಯುತ್ತಿರಬೇಕಾದ ಸಮಯ.

ಮೊನ್ನೆ ನಾನು ಇಂತಹ ನೇತ್ರಾನಂದವನ್ನನುಭವಿಸುತ್ತ ಸಮಾಧಿಸ್ತನಾಗಿದ್ದಾಗ, ಪಾಟೀಲ ಪರಮೇಶಿ ವಕ್ಕರಿಸಿದ. ಅವನು ಹೀಗೆ ವಕ್ಕರಿಸುತ್ತಲೂ ನೇತ್ರಾ ಪ್ಯಾಡು ಪೆನ್ಸಿಲ್‌ಗಳನ್ನೆತ್ತಿಕೊಂಡು ಹೊರಗೆ ನಡೆದಳು. 'ಏನಾರ ಆದೀತಽ ಹೊರಗೆ ನಡದೇನ; ಯಾರಾರ ಬಂದಾರಽ ಹೊರಗ ಹೋದೇನಽ ಅಂತಿರತದ ಇದು. ಸುಡ್ಲಿ, ಮುಟ್ಟಲು ಮುರಕೀ ಹಂಗ. ಕೆಲಸದ ಕಡೆಗೆ ಗಮನನು ಇಲ್ಲ' ಎಂದುಕೊಂಡೆ ಇರಲಿ.

ಧಾರವಾಡ ಪಾಟೀಲ ಮೂರುದಿವ್ಸದಿಂದ ಬೆಂಗಳೂರಿನ್ಯಾಗಽ ಇದ್ದನಂತ. ಇನ್‌ಕಮ್‌ಟ್ಯಾಕ್ಸ್ ಕಮೀಷನರ ಆಫೀಸಿನ್ಯಾಗ ಏನೋ ಕೆಲಸಂತ. ಯಾಕೋ ಒಂದ ತರಹ ಚಿಂತಿಯೊಳಗ ಇದ್ದಂಗ ಕಂಡ. ಸ್ವಲ್ಪ ಸೊರಗಿಧಂಗ ಅನಸತಿತ್ತು.

''ಮನೀಗೆ ಫೋನಹಚ್ಚಿ ಉಣ್ಣಾಕ ಮನೀಗೆ ಬರತೇವಂತ ಹೇಳಿಬಿಡು'' ಅಂದ

''ಯಾಕೋ ಪರಮೇಶಿ ಬೇಶದಿಯಿಲ್ಲೋ....? ಮನ್ಯಾಗ ಯಲ್ಲಾರೂ...'' ಎಂದೆ ತುಸು ಗಾಬರಿಯಲ್ಲಿ.

''ಹಾಂಗೇನಿಲ್ಲ....ಯಲ್ಲಾ ಆರಾಮ ಆಯ್ತಿ... ಆದರೂ.....'' ಎಂದು ಏನೋ ಧೇನಿಸಿ ಮತ್ತೆ ''ಮನ್ಯಾಗ ಮಾತಾಡೂಣ ನಡಿ'' ಎನ್ನುತ್ತ ಎದ್ದುಬಿಟ್ಟ. ಸರಿ! ಮನೆಗೆ ನಡೆದೆವು.

ಮನೆಯಲ್ಲಿ ಚಹ ಕುಡಿದು ಸ್ನಾನಕ್ಕೆ ನಡೆಯುತ್ತಾ ''ಸಿಟಿ ಮಾರ್ಕೆಟಿನ್ಯಾಗ ಉಲಕೋಚಿ ಅಂತ ಸಿನಿಮಾ ಥೇಟರ ಆಯಿತೇನು?'' ಎಂದ.

''ಉಲಕೋಚಿ ಅಲ್ಲ..... ಉಲೂಚಿ'' ಎಂದೆ

''ಯಾಡ್ಡೂ ಒಂದಽಽ.... ಆ ನಿನ್ನ ಉಲಕೂಚಿ ಟಾಕೀಸದಾಗ ''ಕೀಲುಗುರ್ರಂ'' ಬಂದೈತಿ ಹಳೇದು... ಸಂಜೀಕೆ ಹೋಗೋಣು'' ಎಂದ.

''ಯಾಕೋ ಪರಮೂ ನಿನಗೇನು ತಲಿ ಗಿಲೀ ಕೆಟ್ಟದೇನು.... ಸಿಟಿ ಮಾರ್ಕೆಟ್‌ದಾಗ, ಅದರಾಗ ಉಲಕೋಚಿ ಥೇಟರದ ಹತ್ತರ ಹಾಯ್ದರ ಸಾಕು ಏಡ್ಸ್‌ರೋಗ ಬಡಕೋತದ....

ಅದಿರಲೀSS ಈಗ ಯಲ್ಲಾಬಿಟ್ಟು ನಿನಗ 'ಕೀಲುಗುರ್‍ರ್ರಂ' ನೋಡೋ ಹಂತಾದ್ದೇನು ಹೊತ್ತು ಬಂದSದ'' ಎಂದೆ.

''ಹೇಳತೀನಿ - ಹೇಳತೀನಿ'' ಎಂದು ಸಂತೈಸುತ್ತ ಟಾವೆಲ್ ಹೆಗಲಿಗೇರಿಸಿ ಸ್ನಾನಗೃಹವನ್ನು ಹೊಕ್ಕ.

★★★

ತೆಲುಗಿನ ಅಕ್ಕಿನೇನಿಯೋ ನಾದಮುರಿಯೋ ನಟಿಸಿದ ''ಕೀಲುಗುರ್‍ರ್ರಂ'' ಪರಮೇಶಿ ಹಾಗೂ ನನ್ನ ಜೀವನದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಅದು ಹೀಗೆ:

ಸುಮಾರು ನಲವತ್ತು ವರುಷಗಳ ಹಿಂದೆ ನಾವು ಬಿ.ಎ. ಪರೀಕ್ಷೆಗೆ ಕೂತಿದ್ವಿ, ಮೂರನೇ ಸಲಕ್ಕ. ಪರೀಕ್ಷಾ ಮುಗದ ನಿರುಂಬಳ ಏನೋ ಆಗಿದ್ವಿ ಖರೆ. ಆದರೆ ನಾಲ್ಕನೇ ಸಲ ಮತ್ತೆ ಮರಳಿ ಕೂಡಬೇಕಾಗತದೇನೋ ಅಂಬೊ ಚಿಂತಿ ಕಾಡತಿತ್ತು. ರಿಝಲ್ಟ ಇನ್ನೂ ದೂರ ಇತ್ತು. ದಿನಾಲೂ ಸಂಜೀಕೆ ಕೆಲಗೇರಿ ಕೆರಿ ದಂಡಿಮ್ಯಾಲ ಕೂತು ಚುರಮರಿ ಕಾರದಾಣಿ ತಿನಕೋತ, ಹಿಸ್ಟರೀಗೆ ಇಷ್ಟು ಎಕನಾಮಿಕ್ಸಕ್ಕ ಇಷ್ಟು ಅಂತ ಒಂದೊಂದSS ಒಂದೊಂದSS ಪರೀಕ್ಷಾ ಪೇಪರಗಳಿಗೆ ನಾವS ಅಜಮಾಸ ಇಂತಿಷ್ಟು ಬೀಳಬಹುದು ಅಂತ ಗುಣಾಂಕ (ಮಾರ್ಕ್ಸ್) ಗಳನ್ನು ಹಾಕಿಕೊಳ್ಳುತ್ತಿದ್ದೆವು. ನಮ್ಮ ಪೇಪರಗಳಿಗೆ ನಾವೇ ಎಷ್ಟೇ ಲಿಬರಲ್ ಆಗಿ ಸಾಕಷ್ಟು ಕೈ ಸಡಿಲುಬಿಟ್ಟು ಮಾರ್ಕ್ಸ್ ಹಾಕಿದರ ಸಹಿತS ಯಾವದೇ ಪೇಪರಿಗೆ ಹದಿನೈದು ಅಥವಾ ಇಪ್ಪತ್ತರ ಮ್ಯಾಲೆ ಬೀಳತಿದ್ದಿಲ್ಲ. ನಮ್ಮದೇ ಪೇಪರ ಆದರೇನಾತು? ರಿಯಾಲಿಟಿ ಬಿಡಲಿಕ್ಕ ಬರೂದುಲ್ಲಲ್ಲ? ಹಿಂಗಾಗಿ ನಮ್ಮ ಪರಿಣಾಮ ನಮಗೆ ತಿಳಿದೇ ಹೋಗಿತ್ತು.

ಇದೇ ಚಿಂತಿಯೊಳಗೇ ನಾವು ಸಣ್ಣಾಗಿ ಹೋಗಿದ್ವಿ. ಪರಿಣಾಮ ಪ್ರಕಟಣೆಯ ದಿನ ಹತ್ತಿರ ಬಂಧಂಗ ಇನ್ನಷ್ಟು .... ಮತ್ತಷ್ಟು ಸಣ್ಣಾಗಿಕೋತ ನಡದ್ವಿ. ಊಟ ಹೋಗಧಂಗಾತು. ನಿದ್ದಿ ಹತ್ತಧಂಗಾತು. ಚಹ, ಸಿಗರೇಟು ಯಾವದರಾಗೂ ರುಚಿ ಇಲ್ಲಧಂಗಾತು. ತೀರ್ಥರೂಪರ ಮಾರೀ ತಪ್ಪಿಸಿ ಅಡ್ಡ್ಯಾಡೋ ದಿವಸ ಬಂದ್ವೂ! ಉಳಿದ ಬಂಧು ಬಾಂಧವರ ಮೇಲೆ ಅಕ್ಕಸತನದಿಂದ ಹರಿಹಾಯೋ ದಿವಸ ಬಂದ್ವೂ! ಪ್ಯಾಟಿಯೊಳಗ ಕುಲಕರ್ಣಿ ಚಂಪಿ, ಹಿರೇಮಠ ಗಂಗೂ, ಲಿಲಿ ಡಿಸೋಝಾನಂತಹ ಕೆಣಕು ಚಲುವೆಯರು ತೀರಾ ಎದರಾ ಬದರಾ ಬಂದರ ಸಹಿತ ಮಾರೀ ಎತ್ತಿ ನೋಡೋ ಹಂಗ ಆಗತಿದ್ದಿಲ್ಲ! ಒಟ್ಟಿನ ಮ್ಯಾಲೆ ಟೆನ್ಶನ್ನೋ ಟೆನ್ಶನ್ನು .... ಎದ್ದರ ಬಿದ್ದರ ಟೆನ್ಶನ್ನು... ನಿಂತರ ಕುಂತರ ಟೆನ್ಶನ್ನು..... ಚಿಂತಿ, ಕ್ಲೇಶ.... ಉದ್ವೇಗ.... ಮಣಭಾರ ಒತ್ತಡ. ಒಟ್ಟS ಜೀವನSS ಬ್ಯಾಸರ ಬಂದಿತ್ತು.

ಹಿಂತಾ ಸಾಡೇಸಾತೀ ದಿವ್ಸದಾಗ ''ವಿಜಯಾ'' ಟಾಕೀಸಿಗೆ ''ಕೀಲುಗುರ್‍ರ್ರಂ'' ಬಂದಿತ್ತು. ಏನು ಅದ್ಭುತ ಪಿಚ್ಚರ ಇತ್ತು ಅಂತೀರಿ ಅದು. ಸ್ಟೋರಿ ಈಗ ನೆನಪಿಲ್ಲ. ಚೂರು ಪಾರು ನೆನಪಿದ್ದದ್ದು ಸಹಿತ ಕನಫ್ಯೂಸ್ ಆಗೇದ ಯಾಕಂದ್ರ ಆವಾಗ ಕೀಲುಗುರ್‍ರ್ರಂ ..... ಬಾಲನಾಗಮ್ಮ.... ಪಾತಾಳ ಭೈರವಿ ಹೀಂಗS ಒಂದS ಸ್ಟೋರಿವು ನಾಲ್ಕೈದು

ಪಿಚ್ಚರು ಬಂದಿದ್ವು,

ಒಬ್ಬಾಂವ ಅಷ್ಟ ಪೈಲ ಮಾರೀ ಗುದಗಗುದಗ ಅನ್ನೋ ರಾಜಕುಮಾರ ಟೈಟ ಸಲ್ವಾರ, ಮ್ಯಾಗೊಂದು ಝುಗಾ ಹಾಕ್ಕೊಂಡು ಒಂದು ಕಟಿಗೀ ಕುದರೀ ಮ್ಯಾಲ ಕೂತು ಕೀಲಿ ಕೊಡತಾನ. ಕೀಲಿ ಕೊಟ್ಟ ಕೂಡಲೇ ಕುದರಿ ರಾಜಕುಮಾರನ್ನ ಹೊತಗೊಂಡು ಆಕಾಶಮಾರ್ಗೇ ಎಲ್ಲಿ ಬೇಕೆಂದಲ್ಲಿ ಹೋಗತದ. ಸಮುದ್ರ; ಪರ್ವತ, ನದಿ, ಗುಡ್ಡ, ಹಿಂಗ ಯಲ್ಲಾದರ ಮ್ಯಾಲ ಹಾರಿ ಹಾರಿ ಸಪ್ತ ಸಾಗರಗಳ ಆಚೆಗೆ ಪರ್ವತದ ತುದಿಯ ಗುಹೆಯಲ್ಲಿ ಇರೋ ಅಕರಾಳ ವಿಕರಾಳ ರಾಕ್ಷಸನ ಹತ್ತರ ಹೋಗತದ. ಯಥಾಪ್ರಕಾರ ರಾಜಕುಮಾರಗೂ ರಾಕ್ಷಸಗ ಘನಘೋರ ಫೈಟಿಂಗ್ ಆಗತದ. ರಾಕ್ಷಸ ಸೋತು ಸಮುದ್ರದಾಗ ಅಡಗಿಕೋತಾನ.... ಆಮ್ಯಾಲ ಒಂದು ಅತ್ಯಂತ ಕೃತ್ರಿಮ ಪ್ಲಾಸ್ಟಿಕದ ಹೂತೋಟದೊಳಗ ಯಾವುದೋ ದೇಶದ ರಾಜಕುಮಾರಿ ತನ್ನ ಕೆಟ್ಟ ಕೆಟ್ಟ ಮಾರಿ ಸಖಿಯರೊಂದಿಗೆ 'ಧಿಗ್... ಧಿಗ್' ಅಂತ ನೆಲ ಒದಕೋತ ಬಂದು ಡ್ಯಾನ್ಸ ಮಾಡಿಕೋತ ಕೆಟ್ಟ ಧನಿಯೊಳಗ ಒಂದು ಹಾಡು ಒದರತಿರತಾಳ..... ಅತ್ತಲಾಗ ಒಬ್ಬಾಂವ ಗಡ್ಡ ಜಟಾ ಬಿಟ್ಟ ಕುರುಡ ಮುದಕ ಮಂದೀ ಮ್ಯಾಲ ಉಪಕಾರ ಮಾಡಿದವರಹಂಗ ಸುಮಸುಮ್ಮನ ಕಾಲು ನಡಗಿಸಿಕೋತ ಅಡ್ಡ್ಯಾಡತಿರತಾನ..... ಇತ್ತಲಾಗ ಈ ಅಕರಾಳ ವಿಕರಾಳ ರಾಕ್ಷಸ ಮತ್ತ ಸಮುದ್ರದಿಂದ ಎದ್ದ ಬಂದು ಉಸರುಗಟ್ಟೋಹಂಗ ಡಾಯಿಲಾಗ ಹೊಡಕೋತ ಹೂ ಹೂ ಹೂ ಹೂ ಅಂತ ಪಾವಟಣಿಗಿ ನಗೀ ನಗತಾನ..... ಇದ್ದಕ್ಕಿದ್ದಂಗ ಒಂದು ಪಟ್ಟಾಭಿಷೇಕದ ದೃಶ್ಯ ... ಮತ್ತ ಒಂದನಾಕು ಮಂದಿ ಧಿಬಲೇರು ಬಂದು ಕುಣದು ಹೋಗತಾರ.... ಆಮ್ಯಾಲೋ ಅಥವಾ ಅದಕ್ಕೂ ಮೊದಲೋ ಕಥಾನಾಯಕಿ ಪರಾತದಂತಹಾ ಅಗಲ ಮಾರೀ ಮಾಡಿಕೊಂಡು ಒಂದು ದಟ್ಟಡವಿಯೊಳಗ ಬಕೀಟಗಟ್ಟಲೇ ಕಣ್ಣೀರು ಸುರಿಸಿಗೋತ....ಹ್ಯೊಂ ಅಂತ ಅತಗೋತ ಹೊರಟಿರತಾಳ....ನಡನಡುವ ಝೋಲಿ ತಪ್ಪತಿರತದ, ಒಮ್ಮೆಲೆ ಗುಡುಗು ಮಿಂಚು ಸುರು ಆಗಿ ಕುಂಭದ್ರೋಣವಾಗಿ ಮಳೀ ಸುರಿಲಿಕ್ಕೆ ಹತ್ತತದ. ಮಳೀ ಸುರು ಆಗೂತಲೇ ನಮ್ಮ ಪರಾತವದನಾ ಒಂದು ಗಿಡದ ಬುಡಕ ಅವಳೀ ಜವಳೀ ಹಡೀತಾಳ. ಹಡಿಯೋದರಕಿಂತ ಮುಂಚೆ ಎದ್ದು ಕೂತು ಒಂದು ಹಾಡ ಹಾಡಿ ಹಡೀತಾಳ..... ಒಮ್ಮೆಲೇ ರಾಜಕುಮಾರ ಒಂದು ಭಯಾನಕ ಸಿಂಹವನ್ನೆದುರಿಸತಾನ. ಮೊದಲು ಡಾಯಿಲಾಗ ಹೊಡೆದ ಹೊಡೆದ. ಆ ಪಾಪದ ಮೂಕ ಪ್ರಾಣಿಯನ್ನ ಹಣ್ಣ ಮಾಡಿ ಆಮ್ಯಾಲೆ ಅದರ ಸಂಗತಿ ಕುಸ್ತಿ ಹಿಡದು ಬರೇ ಕೈಲೇ ಕೊಲ್ಲತಾನ... ಆಮ್ಯಾಲೆ ಇದ್ದಕ್ಕಿದ್ದಂಗ ಒಂದು ಮೋಟಾರ ಅಪಘಾತ ಆಗ್ತದ ಅದರಾಗ ರಾಜಕುಮಾರ ಜಖಮಿ ಆಗತಾನ.... ಆವಾಗ ಹಾ-ಹಾ ಅಂತ ನಕ್ಕೋತ ರಾಕ್ಷಸ ಅವನ್ನ ಕೊಲ್ಲಲಿಕ್ಕೆ ಬರತಾನ... ಅಷ್ಟರಾಗನೂ ಒಂದು ಕಪ್ಪು ಕೃಷ್ಣ ಸರ್ಪ ಎಲ್ಲಿಂದಲೋ ಬಂದು ಆ ರಾಕ್ಷಸನ ಹಿಂಗಾಲಿಗೆ ಕಟಕ್ ಅಂತ ಕಡದ ಬಿಡತದ..... ರಾಜಕುಮಾರನ ಬದಲೀ ರಾಕ್ಷಸ ಸಾಯತಾನ....ಸಾಯೋಕಿಂತ ಮೊದಲ ಎದಿ ಹಿಡಕೊಂಡು ಅ... ಆ.... ಎ...ಏ ಓ..,.ಐ ಅಂ...ಅಃ.... ಅಂತ ಕೆಟ್ಟ ಕೆಟ್ಟ ಮಾರಿ ಮಾಡಿ ಸಾಯೋ ಆ್ಯಕ್ಟಿಂಗ ಮಾಡಿಕೋತ, ಪ್ರೇಕ್ಷಕರನ್ನ ಕೊಂದು ತಾ

ಸಾಯುತಾನ... ಆ ರಾಕ್ಷಸ ಸಾಯೋಮುಂದ ಆಕಾಶದಾಗ ಗುಡುಗು ಮಿಂಚು ಹೋಡೀತದ ಅದರ ಬೆನ್ನ ಹಿಂದೇ ಕುಂಭದ್ರೋಣವಾಗಿ ಮಳೀ ಸುರು ಆಗತದ ... ಮಳೀ ನೋಡೂತಲೇ ನಮ್ಮ ಪರಾತವದನಾ ಮತ್ತ ಅಡವಿಗೆ ಹೊರಡತಾಳ ಗಿಡಾ ಝಡಕಿಕೋತ.

ಪುಣ್ಯಾಕ್ಕ ಲಗೂನ ಶಿವಾ ಪಾರ್ವತಿ ಪ್ರತ್ಯಕ್ಷ ಆಗತಾರ, ಶಿವಾ ಪಾರ್ವತಿಯರನ್ನ ನೋಡೂತಲೆ ಇದ್ದ ಬಿದ್ದವರೆಲ್ಲರೂ ಕೂಡಿ ಒಂದು ಕರ್ಣ ಕಠೋರವಾದ ಕೋರಸ್ ಒದರತಾರ.... ಇಲ್ಲಿಗೆ 'ಕೀಲುಗುರ್ರ್ರಂ' ಮುಗೀತದ.

ನಮಗ ಭಾಷಾ ತಿಳೀತಿರಲಿಲ್ಲ. ಪಡದೇದ ಮ್ಯಾಲಿನ ಗೊಂದಲಕ್ಕ ಕಾರ್ಯಕಾರಣಗಳ ಸಂಬಂಧ ಹತ್ತತಿರಲಿಲ್ಲ. ಆದರೂ ಸಹಿತ ಸಿನೇಮಾದಾಗ ಪುಂಖಾನುಪುಂಖವಾಗಿ ಅದ್ಭುತ ರಮ್ಯ ಘಟನೆಗಳು ಒಂದನ್ನೊಂದು ಅಟ್ಟಿಸಿಕೊಂಡು ಬರತಿದ್ದವಲ್ಲಾ ಅದು ಮಜಾ ಅನಸತಿತ್ತು. ಆ ಅರ್ಥೈಸಲಿಕ್ಕಾಗದ ಘಟನಾವಳಿಗಳು ನಮ್ಮನ್ನ ಯಾವದೋ ಒಂದು ಮಾಯಾಲೋಕಕ್ಕೆ ಕೊಂಡೊಯ್ಯುತ್ತಿದ್ದವು. ನಮ್ಮ ಚಿಂತೀ ಮರಸತಿದ್ದವು. ನಿದ್ದೀ ಗುಳಿಗೆ ತಕ್ಕೊಂಢಂಗ. ಮೂರು ನಾಲ್ಕು ದಿವಸ ಕೀಲುಗುರ್ರಂ ಧುಂದ್ ಹಿಡಿಸಿಬಿಟ್ಟಿರತಿತ್ತು. ಆಮ್ಯಾಲೆ ಮತ್ತ ಚಿಂತಿ. ಮತ್ತ ಕೀಲುಗುರ್ರಂ. ಮತ್ತ ಕೆಲಗೇರಿ ಕೆರಿ, ಚುರಮರಿ. ಮತ್ತ ಕೀಲುಗುರ್ರಂ. ಹೀಂಗ ಕಡಿಕೊಮ್ಮೆ ಪರೀಕ್ಷಾದ ಪರಿಣಾಮ ಬಂದು ಇನ್ನೊಮ್ಮೆ ನಾಪಾಸ ಆಗೇವಿ ಅಂತ ತಿಳಿಯೋ ತನಕ ಹದಿನೈದು ಇಪ್ಪತ್ತು ಸರೆ 'ಕೀಲುಗುರ್ರಂ' ನೋಡಿದ್ವಿ.

ಮುಂದ ಜೀವನದಾಗ ಸಹಿತ ಇದS ಅಭ್ಯಾಸ ಬೆಳೆದುಬಂತು. ಏನಾರ ಚಿಂತೀ, ಕ್ಲೇಶ, ಟೆನ್ಶನ್, ಕನ್‌ಫ್ಯೂಶನ್ ಸುರೂ ಆದಕೂಡಲೇ 'ಕೀಲುಗುರ್ರಂ' ನೆನೆಸಿಕೋತಿದ್ವಿ. ಎಲ್ಲೆರ ಇದ್ದರ ಹೋಗಿ ನೋಡಿ ಬರತಿದ್ವಿ. ಒಮ್ಮೆ ವ್ಯಾಪಾರದಾಗ ಲುಕ್ಸಾನ ಆತಂತ ಪರಮೇಶಿ 'ವಿಜಯವಾಡಾ'ಕ್ಕ ಹೋಗಿ 'ಕೀಲುಗುರ್ರಂ' ನೋಡಿ ಬಂದಿದ್ದ. ಹಂಗS ಯಾವಯಾವದೋ ಚಿಂತಿ ಮರೆಯಲಿಕ್ಕೆ 'ಎರ್ಣಾಕುಳಂ' ಕ್ಕ, ಔರಂಗಾಬಾದಕ್ಕ, 'ತ್ರಿಪುಣಿತುರಾಕ್ಕ' ಹೋಗಿ ನೋಡಿ ಬಂದಿದ್ದ. ಒಮ್ಮೆ ಅನಕಾ 'ಝುಮಾರಿ ತಲೈಯಾ'ಕ್ಕ ಸಹಿತ ಹೋಗಿ ಬಂದಿದ್ದ.

ಈಗ ಬೆಂಗಳೂರಿಗೆ ಬಂದಿದ್ದ 'ಕೀಲುಗುರ್ರ.' ನೋಡಲಿಕ್ಕೆ.

★★★

''ಪರಮೇಶಿ ಈಗ 'ಕೀಲುಗುರ್ರಂ' ನೋಡೋಹಂತಾದ್ದೇನು ಬಂತಪ್ಪ'' ಎಂದು ಕೇಳಿದೆ, ಊಟ ಮುಗಿಸಿ ಕೈ ತೊಳೆಯುತ್ತ.,

''ಅದSS.... ಈ ನಮ್ಮ ದಾವಣಗೇರಿ ಬೀಗರದಾರಲ್ಲSSS'' ಎಂದು ಪ್ರಾರಂಭಿಸಿದ .... ಹೋದ ವರಷ ಒಂದಿಪ್ಪತ್ತೈದು ಲಕ್ಷ ಕೈಗಡ ಇಸಗೊಂಡಿದ್ದರು. ಬೀಗರ ಕೆಲಸ ಹೆಂಗೋ ಏನೋ ಅಂತ ನಾನೂ ಹಂಗSS ಲೆಕ್ಕಕ್ಕ ಹಚ್ಚದ ಕೊಟ್ಟಿದ್ನಿ'' ಎಂದ.

''ಸರಿ ದಾವಣಗೇರಿಯುವರು ಹುಬ್ಬಳಿಯುವರಗೆ ಹುಬ್ಬಳ್ಳಿಯುವರು

ದಾವಣಗೇರಿಯವರಿಗೆ ಟೊಪ್ಪಿ ಹಾಕೋದೇನು ಹೊಸಾದಲ್ಲಲ್ಲ? ಇನ್ನ ಇಪ್ಪತ್ತೈದ ಲಕ್ಷದ ವಸೂಲಿಗೆ ಒದ್ದಾಟ ಸುರೂ....'' ಎಂದೆ.

''ಹಾಂಗೇನಿಲ್ಲ....ತಿರಗಿ ಕೊಟ್ಟು.. ಆದರ ಲೆಕ್ಕಕ್ಕ ಹಚ್ಚಿ ಕೊಟ್ಟಬಿಟ್ಟರು'' ಎಂದ ಪರಮೇಶಿ.

''ಹೋಗ್ಲಿ ಬಿಡು, ದುಡ್ಡು ಬಂತಲ್ಲ...?'' ಎಂದೆ ನಾನು ಅಜ್ಞಾನದಲ್ಲಿ.

''ನಿನಗತಿಳೀಲಿಲ್ಲ ಹೌದಲ್ಲೊ?... ಹೇಳತೀನಿ ಕೇಳು. ನಾ ಅವರಿಗೆ ಟೊಂಟಿಫ್ಯಾವ್ ಲೆಕ್ಕಕ ಹಚ್ಚದ ಹಂಗ ಕ್ಯಾಶ ಕೊಟ್ಟಿದ್ದೆ. ಅವರೂ ಹಂಗS ಕೊಡಬೇಕೋ ಬ್ಯಾಡೋ... ರೊಕ್ಕಾ ಏನೋ ಕೊಟ್ಟರು ಖರೇ ಆಯ್ತು... ಆದರ ತಿರಗಿ ರಿಟರ್ನ ಫೇಡ ಮಾಡಬೇಕಾರ ಲೆಕ್ಕಕ್ಕ ಹಚ್ಚಿ ಕೊಟ್ಟಬಿಟ್ಟರು'' ಎಂದ ಈ ಲೆಕ್ಕಕ್ಕ ಹಚ್ಚೋದೇನು, ಬಿಡೋದೇನು ಒಂದೂ ತಿಳೀಲಿಲ್ಲ. ನನ್ನ ತಲಿಯೊಳಗ ರಾಜಕುಮಾರ ಕುದರಿಗೆ ಕೀಲಿ ಕೊಡಲಿಕ್ಕೆ ಹತ್ತಿದ. ಪರಮೇಶಿ ಬಿಡಲಿಲ್ಲ. ''ನಿನಗ ತಿಳಿಯೂ ಹಂಗSS ಹೇಳತೀನಿ ನೆಟ್ಟಗ ಕೇಳSS...ನಾ ಲೆಕ್ಕಕ್ಕ ಹಚ್ಚದS ಹಂಗ ಕ್ಯಾಶ ಕೊಟ್ಟಿದ್ನಿ... ಅವರು ರಿಟರ್ನ ಫೇಡ ಮಾಡೊ ಮುಂದ ಅಕೌಂಟಿಗೆ ಹಚ್ಚಿ ಚೆಕ್‌ಲೇ ಕೊಟ್ಟಬಿಟ್ರು.. ನಾನೂ ಯಾವುದೋ ಧ್ಯಾಸಗಾದ ಚೆಕ್ ಮುರಿಸಿ ಅಕೌಂಟಿಗೆ ತಗೊಂಡುಬಿಟ್ಟೆ. ಈಗ ಇನ್‌ಕಮ್ ಟ್ಯಾಕ್ಸಿನವರು ಜೀವಾ ತಿನ್ನಾಕ ಹತ್ಯಾರು. ಟೊಂಟೀಫ್ಯಾವ್ ಲ್ಯಾಕದ ಮ್ಯಾಲ ಇನ್‌ಕಮ್ ಟ್ಯಾಕ್ಸ ಕೊಡು ಅನ್ನಾಕ ಹತ್ಯಾರು....'' ಎಂದು ವಿವರಿಸುತ್ತ ನನ್ನ ಮುಖದ ಮೌಢ್ಯವ ಕಂಡು ಕನಿಕರಿಸಿ ''ನಿನಗ ನಿಂದS ಉಧಾರಣೆ ಕೊಟ್ಟ ಹೇಳತೇನಿ ನೋಡು... ಈಗ ನೀವು ಆಫೀಸರಗೋಳು ಟೇಬಲ್ಲಿನ ಮ್ಯಾಗೂ ತೊಗೋತೀರಿ....ಟೇಬಲ್ಲಿನ ಕೆಳಗೂ ತೊಗೋತೀರಿ ಹೌದಲ್ಲೋ....ಟೇಬಲ್ಲಿನ ಕೆಳಗ ತೊಗೊಂಡದ್ದಕ್ಕ ಇನ್‌ಕಮ್ ಟ್ಯಾಕ್ಸ ಕೊಡೂ ಹೊತ್ತ ಬಂದ್ರ ಹ್ಯಾಂಗ....'' ಎಂದ ಗೆದ್ದದನಿಯಲ್ಲಿ.

ನನ್ನ ತಲೀ ಅಂಬೋದು ಮುನಸೀಪಾಲ್ಟಿ ಆತು.

''ಪರಮೇಶೀ ...ಕೀಲುಗುರ್‍ರಂ ಪಿಚ್ಚರಿಗೆ ಹೋಗೋಣ ನಡಿ'' ಎಂದೆ. ಹೋದ್ವಿ. ಯಥಾಪ್ರಕಾರ ಎಣಿಸಿದಂತೆ ಅಲ್ಲಿ ದೊಂಬಿ ನಡದಿತ್ತು. ಪೋಲಿಸರು ನೋಡಿಕೋತ ನಿಂತಿದ್ದರು. ಹೌಸ್‌ಪುಲ್ ಬೋರ್ಡ್ ಹಾಕಿದ್ದರು. ಹತ್ತರ ಟಿಕೀಟು ಮೂವತ್ತಕ್ಕ ಮಾರಲಿಕ್ಕೆ ಹತ್ತಿದ್ದರು. ಕ್ಷಣಾರ್ಧದಾಗ ಅವೂ ತೀರಿದವು. ಈಗ ಖರೋಖರ ಹೌಸ್‌ಪುಲ್ ಆತು. ನಾವು ನಿರಾಶರಾಗಿ ಮರಳಿದೆವು.

ಬರೋಮುಂದ ಒಂದS ಅಳತೀಲೇ ಪರಮೇಶಿ ''ದಾವಣಗೇರಿ ಬೀಗರ ಧಡ್ಡತನ .. ಇನ್‌ಕಮ್ ಟ್ಯಾಕ್ಸ ಕಮೀಷನರ ಮದ್ರಾಸೀ ಭಟ್ಟ ಅದಾನು... ಭಾಳS ಸ್ಟ್ರಿಕ್ಟ ಅದಾನು ಅಂತ ನಾಮೇ ಅಯತಿ... ಮೂರದಿವ್ಸದಿಂದ ಹೋದ್ರೂ ಹಚಗೋವಲ್ಲ. ... ಯಷ್ಟರ ತೊಗೋತಾನೋ ದೇವರಿಗೇ ಗೊತ್ತು.. ಯಲ್ಲಾ ಬಿಟ್ಟ ಕೈಗಡದ ಟೊಂಟಫ್ಯಾವದ ಮ್ಯಾಗೂ ಟ್ಯಾಕ್ಸ್ ಕೊಡಂದರ ಗೈರ ಆಕ್ಕೈತಿ...'' ಅನಕೋತ ಒಟ ಒಟ ಮಾಡಿಕೋತನ ಬಂದ. ದಾರಿಯೊಳಗS ಟೌನಹಾಲ ಬಂತು. ಏನೋ ಗದ್ದಲ ನೆರೆದಿತ್ತು ನೂರಾರು

ಬಣ್ಣಬಣ್ಣದ ಕಾರುಗಳ ಸಂತೆಯೇ ನೆರೆದಂತಿತ್ತು. ಮೆರಗು ಮೆರಗಿನ ಪಟ್ಟಣಿಗರು ಆತುರಾತುರರಾಗಿ ಒಳಗೆ ನಡೆದಿದ್ದರು. ಬಹುಶಃ ಯಾರೋ ಚಿತ್ರನಟಿ ಬಂದಿರಬೇಕೆಂದುಕೊಂಡೆ. ಅಥವಾ ಏನಾರ ಫ್ಯಾಶನೇಬಲ್ ಸಾಂಸ್ಕೃತಿಕ ಕಾರ್ಯಕ್ರಮ. ಮುಂದಿ ತಮಗ ತಿಳಿದಿದ್ದರೂ ಹೋಗತಾರಲ್ಲ - ಅಂಥದೇನಾದರೂ ಇರಬೇಕೆಂದುಕೊಂಡೆ. ಹತ್ತಿರ ಹೋಗಿ ನೋಡಿದರೆ ''ಗೀತಾಸತ್ರ, ಸ್ವಾಮಿ ದಿವ್ಯಾನಂದರಿಂದ ಗೀತಾ ಪ್ರವಚನ ಸಪ್ತಾಹ'' ಎಂಬ ಬೋರ್ಡು ತೂಗುತ್ತಿತ್ತು. ಪರಮೇಶಿಗೆ, ಏನು ಹುಕಿ ಬಂದಿತ್ತೋ 'ನೋಡೋಣ ಬಾ ಇದೂ ಒಂದ ಆಗಿ ಹೋಗಲಿ'' ಎಂದ. ಸರಿ ನಾವು ಮೆಟ್ಟಿಲೇರಿದೆವು.

ಇನ್ನೇನು ಪ್ರಚನ ಶುರುವಾಗಲಿತ್ತು. ಶುಭ್ರ, ಶ್ವೇತ ಬಿಳಿ ಸೀರೆಯುಟ್ಟ ನಾಲ್ಕಾರು ಸುಂದರಿಯರು ಇತ್ತಿಂದತ್ತ ಅತ್ತಿಂದಿತ್ತ ಕೆನೆದಾಡುತ್ತಿದ್ದರು.

ವಿದೇಶಿ ಕಾರುಗಳಲ್ಲಿ ಬಂದಿಳಿದ ಆಢ್ಯರನ್ನು ಕೈಲುಕುಕಿ, ನಮಸ್ಕರಿಸಿ ತುಟಿ ಹಿಗ್ಗಿಸಿ, ಆರಿಂಚಿನ ನಗೆಸೂಸಿ, ಮೈಬಳುಕಿಸಿ ಬಗ್ಗಿಸಿ ರಾಜಮರ್ಯಾದೆಯಿಂದ ದಿವ್ಯಾನಂದರ ಒಡ್ಡೋಲಗಕ್ಕೆ ಕರೊದೊಯ್ಯುತ್ತಿದ್ದರು.

ಭಾರತೀಯ ಕಾರುಗಳಲ್ಲಿ ಬಂದವರನ್ನು ಸಮಸ್ಕರಿಸಿ ತುಟಿ ಹಿಗ್ಗಿಸಿ ನಾಲ್ಕಿಂಚಿನ ನಗೆಸೂಸಿ ಮೈ ಬಗ್ಗಿಸದೇ ಬರಿ ಬಳುಕಿಸಿ ''ಯೂ...ರ... ವೆಲಕಮ್'' ಎಂದು ಒಳಗೆ ಕಳಿಸುತ್ತಿದ್ದರು.

ಕಾರುಗಳಿಲ್ಲದೇ ಬಂದಂತಹ ನಮ್ಮಂತಹ ಹಿರಿಯ ಅಧಿಕಾರಿಗಳನ್ನು ಅವರವರ ಉರಿಮುಖ, ಖಲ್ವಾಟತಲೆ, ಮೊಂಡ ಮೂಗುಗಳಿಂದ ಗುರುತಿಸಿ, ಗೋಣು ಕೊಂಕಿಸಿ (ತಮ್ಮ ಗೋಣನ್ನು) ತುಟಿ ಹಿಗ್ಗಿಸಿ ಎರಡಿಂಚಿನ ನಗೆಸೂಸಿ, ಮೈ ಸೆಟಿಸಿ ಒಳಗೆ ತೋರುತ್ತಿದ್ದರು.

ಕಾರೂ ಇಲ್ಲದೇ ಮೊಂಡಮೂಗೂ ಇಲ್ಲದೇ ಬಂದಂತಹ ಅನೇಕ ಅಧಮಾಧಮರನ್ನು ಕೆಂಗಣ್ಣಿನಿಂದ ನೋಡಿ ಮುಖ ಗಂಟಿಕ್ಕಿ ಮೇಲೆ 'ಅಪ್‌ಸ್ಟೇರ್ಸ್ ಮೇಲೆ'' ಎಂದು ದಬ್ಬಿ ಕೈಝಾಡಿಸಿ ಕೊಳ್ಳುತ್ತಿದ್ದರು.

ಸ್ವತಃ ಶ್ರೀ ಕೃಷ್ಣನೇ ''ಚಾತುರ್ವರ್ಣ್ಯಂ ಮಯಾ ಸೃಷ್ಟಂ'' ಎಂದು ಹೇಳಿದ್ದಾನಲ್ಲವೇ?

ಸಭಾಗ್ರಹ ಆಗಲೇ ಕಿಕ್ಕಿರಿದು ತುಂಬಿತ್ತು. ಸುಸಜ್ಜಿತವಾಗಿ ಅಲಂಕರಿಸಿದ ವೇದಿಕೆಯ ಮಧ್ಯಬಾಗದಲ್ಲಿ ತುಸು ಎತ್ತರಿಸಿದ ವೇದಿಕೆಯ ಮೇಲೆ ಕೆಂಪು ಕಿನಕಾಪಿನ ಹೊದಿಕೆ ಹೊದಿಸಿ ಶ್ರೀ ಶ್ರೀ ದಿವ್ಯಾನಂದರು ಪದ್ಮಾಸನದಲ್ಲಿ, ಅಂಜಲಿಬದ್ಧರಾಗಿ ಕುಳಿತಿದ್ದರು. ಸುಮಾರು ಮುವತ್ತು ಮುವತ್ತೈದರ ಹೊಸ ಹರೆಯ. ರಾಜೇಶಖನ್ನಾನ ಕಳೆ. ಕೊರಳಲ್ಲಿ ಒಂದು ದಪ್ಪನೆಯ ಹೂವಿನ ಹಾರ. ಅಷ್ಟೊಂದು ದಪ್ಪನೆಯ ಹಾರದ ಮಧ್ಯೆ ಕೂಡ ನುಸುಳಿ ಮೂಗುತೂರುತ್ತಿರುವ ಒಂದು ಅಗಲವಾದ ಬಂಗಾರದ ಚೈನು. ಬೆರಳುಗಳಲ್ಲಿ ಒಂದೆರಡು ವಜ್ರದುಂಗುರಗಳು. ಕೆನೆ ಬಣ್ಣದ ರೇಷ್ಮೆ ಜುಬ್ಬ. ಭ್ರೂಮಧ್ಯೆ ಪಾವಲಿಯಷ್ಟು

ದುಂಡು ಕುಂಕುಮ. ಮುಖದ ಮೇಲೆ ಸಮಸ್ತ ವಿಶ್ವದ ಬಗ್ಗೆ ಕಾರುಣ್ಯಭಾವದಿಂದ ಕೂಡಿದ ಒಂದು ಮೋನಾಲಿಸಾ ನಗು: ಮಧ್ಯೆ ಮಧ್ಯೆ ಮುಂದಿನ ಸಾಲಿನಲ್ಲಿ ಬರುತ್ತಿದ್ದ ಪ್ರತಿಷ್ಠಿತರ ನಮಸ್ಕಾರಕ್ಕೆ ಪ್ರತಿಯಾಗಿ ಎರಡೂ ಕೈಗಳನ್ನು ಜೋಡಿಸಿ ಹಣೆಗೆ ಮುಟ್ಟಿಸಿ ಪ್ರತಿ ನಮಸ್ಕಾರ.

ದಿವ್ಯಾನಂದರ ಎಡಪಕ್ಕದಲ್ಲಿ ಅನತಿ ದೂರದಲ್ಲಿ ಆರೆಂಟು ಶ್ವೇತಾಂಬರಿ ಸುಂದರಿಯರು ಸಂಗೀತ ವಾದ್ಯಗಳೊಡನೆ ಪವಡಿಸಿದ್ದಾರೆ.

ಅವರ ಬಲಪಾರ್ಶ್ವದಲ್ಲಿ ಹತ್ತಿರದಲ್ಲಿಯೇ ಒಂದು ಚಿಕ್ಕಸಾದಾ ಲೋವರ ದಿವ್ಹಿಜನ್ ವೇದಿಕೆಯ ಮೆಲೆ ಸುಮಾರು ಆಯಿವತ್ತರ ಪ್ರಾಯದ ಕೆಂಪುಶಾಲಿನ, ಪೆಚ್ಚು ಮುಖದ ಹುಚ್ಚು ಕಳೆಯ ಯಾರೊ ಒಬ್ಬಸುಬ್ಬಣ್ಣ, ಬಹುಶಃ ದಿವ್ಯಾನಂದರ ಅಸಿಸ್ಟೆಂಟು, ಆಸನಕ್ಕ ಗ್ರಹಣ ಹಿಡಿಸಿದ್ದ. ವಾತಾವರಣಕ್ಕೆ ಮೆಲ್ಲಮೆಲ್ಲನೇ required ಗಾಂಭೀರ್ಯ ತುಂಬುತ್ತಾ ಬಂತು. ಸರಿಯಾಗಿ ಆರೂ ಇಪ್ಪತ್ತೈದಕ್ಕೆ ಸುಂದರಿಯರ ತಂಡದಿಂದ ಸುರಸುಂದರಿಯೊಬ್ಬಳು ಎದ್ದು ಬಂದು ದಿವ್ಯಾನಂದರ ಬದಿಗೆ ನಿಂತು ಒಂದು ದೊಡ್ಡ ಬಿಳಿಯ ಶಂಖವನ್ನು ಎರಡೂ ಕೈಯಾಗ ಹಿಡದು ಹೊಡದಳು, ಅಂದರ ಊದಿದಳು.

ದಿವ್ಯಾನಂದರು ಎದ್ದು ನಿಂತರು. ಕೂಡಲೇ ಸುಬ್ಬಣ್ಣ ಮತ್ತು ಉಳಿದ ಶ್ವೇತಾಂಬರಿಯರು ಎದ್ದುನಿಂತು ಕಣ್ಣುಮುಚ್ಚಿ ಕೈಮುಗಿದು ರಾಗವಾಗಿ ''ಯದಾ ಯದಾ ಹಿ ಧರ್ಮಸ್ಯ..'' ಹೇಳತೊಡಗಿದರು. ಮುಂದಿನ ಸಾಲಿನ್ಯಾಗ ಕೂತವರು ಕನಪ್ಯೂಸ್ಡ್ ಆಗಿಕೋತ ಒಬ್ಬೊಬ್ಬರೇ ಆಗಿ ಒಬ್ಬರನ್ನ ನೋಡಿ ಇನ್ನೊಬ್ಬರಾಗಿ ಎದ್ದು ನಿಂತರು. ಇಡೀ ಸಭಾಂಗಣ ಎದ್ದು ನಿಂತಿತು. ನನಗ ಪರಮೇಶಿಗೆ ಏನು ಮಾಡಬೇಕೆಂಬೋದು ತಿಳೀಲಿಲ್ಲ. ಕಡೀಕ '' ಈ ರಾಡೀನ ಬ್ಯಾಡ.... ನಾವೂ ಎದ್ದನಿಂತರಾತು'' ಅನ್ಕೊಂಡು ಎದ್ದು ನಿಂತೆವು. ಅಷ್ಟೊತ್ತಿಗೆ ಉಳಿದವರೆಲ್ಲ ಕೂತಿದ್ದರು. ಹಿಂಗಾಗಿ ಹೈಸ್ಕೂಲದಾಗ ಸಾಮೂಹಿಕ ಕವಾಯತ ನಡದಾಗ ತಪ್ಪತಪ್ಪ ಪಿ.ಟಿ. ಮಾಡೋ ಹುಡುಗರ್ಹಂಗ ಆತು ನಮ್ಮ ಅವಸ್ಥಿ.

ಆಮ್ಯಾಲ ದಿವ್ಯಾನಂದರು ಖೇಕರಿಸಿ ''ಓಂSSSSSS'' ಎಂದು ಧೀರ್ಘ ಓಂಕಾರ ನಾದ ಮೊಳಗಿಸಿ ಸುಂದರಿಯರ ತಂಡದತ್ತ ತಿರುಗಿ ತಮ್ಮ ಕಂಚಿನ ಕಂಠದಲ್ಲಿ ''ಸಾಂಖ್ಯಯೋಗ ... ಸೆಕಂಡ ಅಧ್ಯಾಯ...ಶ್ಲೋಕ ಫಿಫ್ಟಿಫೋರ್ .... ಅರ್ಜುನ ಉವಾಚ...'' ಎನ್ನುತ್ತ ಕ್ಲೂ ಕೊಟ್ಟರು.

ಒಡನೆಯೇ ಸುಂದರಿಯರು ರಾಗವಾಗಿ ಧ್ವನಿಪೂರ್ಣವಾಗಿ, ಗಾಂಧಿ ಸತ್ತಾಗ ಹಾಡತಾರಲ್ಲ ಆ ಧಾಟಿಯೊಳಗ;

''ಸ್ಥಿತ ಪ್ರಜ್ಞಸ್ಯ ಕಾ ಭಾಷಾSSSS
ಸಮಾಧಿಸ್ತಶ್ಯ ಕೇಶವSSS
ಸ್ಥಿತಧೀ ಕಿಂ ಪ್ರಭಾಷೇತSSS
ಕಿಮಾಸೀತ ವ್ರಜೇತ ಕಿಂ...''

ಎಂದು ಮತ್ತೆ ದಿವ್ಯಾನಂದರಿಗೆ ಖೋ ಕೊಟ್ಟರು. ಕೂಡಲೇ ದಿವ್ಯಾನಂದರು ಸಭಿಕರಿಗೆ

ಇಂಗ್ಲೀಷಿನಲ್ಲಿ ಗೀತೋಪದೇಶಕ್ಕೆ ತೊಡಗಿದರು. ""The ಗೀರ್ವಾಣವಾಣಿ of ಶ್ರೀಮಾನ್ ಭಗವದ್ಗೀತಾ is so profound so lucid, so all compassing that any translation or explanation of the same renders itself superfluous. For example, see this 54th stanza of ""sankhya".... Arjuna asks the Lord, "O Lord!, What is the ಭಾಷಾ of ಸ್ಥಿತಪ್ರಜ್ಞ, what is his ಸಮಾಧಿ?' ಕೇಶವ that means, he ಕೃಷ್ಣ "that means ಸ್ಥಿತಪ್ರಜ್ಞ...ಕಿಂ ಪ್ರಭಾಷೇತ ಕಿಂ ವ್ರಜೇತ and ಕಿಂ ಆಸೀತ್'' ಹೀಗೆ ಅಮೋಘವಾದ ಅರ್ಥ ವಿವರಿಸಿ ದಿವ್ಯಾನಂದರು ಸುಬ್ಬಣ್ಣನೆಡೆಗೆ ನೋಡಿ ಸನ್ನೆಮಾಡಿ ಮತ್ತೆ ಸಭಿಕರೆಡೆ ಹೊರಳಿ ಮೋನಾಲಿಸಾ ಆದರು.

ಸುಬ್ಬಣ್ಣ ಈ ಗೀತಾಸತ್ರದ ಕನ್ನಡ ಭಾಷಾಂತರಕಾರ, ಒಮ್ಮೆ ದೀರ್ಘವಾಗಿ ಉಸಿರೆಳೆದುಕೊಂಡು ಪ್ರಾರಂಭಿಸಿದರು.

''ಅಹಹಹ.....ಏನದ್ಭುತ...ಏನದ್ಭುತ....ಮಹಾಯೋಗಿಗಳೂ ಸ್ವತಃ ಆ ಗೀತಾಚಾರ್ಯನ ಪ್ರತ್ಯವತಾರರೂ ಆದ ಶ್ರೀಶ್ರೀ ದಿವ್ಯಾನಂದರು ಇಷ್ಟೊಂದು ಸರಳವಾಗಿ ಸುಲಲಿತವಾಗಿ, ಸರಾಗವಾಗಿ ಇಂಗ್ಲೀಷಿನಲ್ಲಿ ಹೇಳಿದ್ದನ್ನು ಮತ್ತೆ ಕನ್ನಡದಲ್ಲಿ ಹೇಳಲೇನಿದೆ. ಗೀತೆ ನೇರವಾಗಿ ಹೃದಯಕ್ಕೆ ತಟ್ಟಬೇಕಾದ ಒಂದು ಸಂದೇಶ, ಅರ್ಥದಲ್ಲೇನಿದೆ....'' ಎನ್ನುತ್ತಿದ್ದಂತೆಯೇ ನಮ್ಮ ಪಕ್ಕದಲ್ಲಿ ಶಾಲು ಹೊದ್ದುಕೊಂಡು ಕುಳಿತ ಮಲ್ಲೇಶ್ವರದ ಮುದಿಮುತ್ತೈದೆಯೊಬ್ಬಳು (ಇಂಥವರು ಮಲ್ಲೇಶ್ವರದಾಗ ಭಾಳ ಸಿಗತಾರ) ''ಅಲ್ವೇ ಮತ್ತೆ..ಅಲ್ವೇ ಮತ್ತೆ'' ಎಂದು ಲೊಚಗುಟ್ಟಿದಳು. ಅತ್ತ ಸುಬ್ಬಣ್ಣನವರು ಗೀತೆಯ ಕನ್ನಡೀಕರಣಕ್ಕೆ ತೊಡಗಿದ್ದರು.''.....ಸ್ಥಿತಪ್ರಜ್ಞನ ಭಾಷೆಯಾವುದು.. ಅವನ ಸಮಾಧಿ ಯಾವದು ಅವನ ಧೀಸ್ಥಿತಿ ಯಾವದು- ಅವನು ಏನನ್ನು ಪ್ರಭಾಷಿಸುತ್ತಾನೆ- ಆಶಿಸುತ್ತಾನೆ. ವ್ರಜೇತ ಕಿಂ... ಅ.ಹ.ಹ... ಅಹ..ಗೀತೆ ಎಂದರೆ ಗೀತೆ... ಎಂದು ಅಪ್ಪಣೆ ಕೊಡಿಸುತ್ತಿದ್ದಂತೆಯೇ ಮಲ್ಲೇಶ್ವರದ ಮುದಿ ಮುತ್ತೈದೆ ಮತ್ತೆ ''ಅಲ್ವೇ ಮತ್ತೆ..ಅಲ್ವೇ ಮತ್ತೆ' ಎಂದು ಪುಟಪುಟಿಸಿದಳು.

ಸುಬ್ಬಣ್ಣ ಮುಂದುವರೆಯುತ್ತಾ''ಪರಮಾತ್ಮನ ಶ್ರೀ ಮುಖದಿಂದ ಹೊರಟು ನೇರವಾಗಿ ಭಕ್ತರ ಹೃದಯವನ್ನು ಪ್ರವೇಶಿಸುವ ಗೀತೆ. ಉಚ್ಚಕೋಟಿಯದು.. ಅತ್ಯುಚ್ಚವಾದುದ್ದು.. ಪರಮೋಚ್ಚವಾದದ್ದು...'' ಎಂದರು.

ಮ.ಮು.ಮು: ''ಅಲ್ವೇ ಮತ್ತೆ.. ಅಲ್ವೇ ಮತ್ತೆ.'' ಎಂದು ಸುಮ್ಮನಾದರು. ಇಷ್ಟೊಂದು ಸಲ''ಉಚ್ಚ- ಉಚ್ಚ-'' ಅಂಬೋ ಶಬ್ದ ಕೇಳಿದ್ದನಂತೋ ಏನೋ ಪರಮೇಶಿ ಒಮ್ಮೆಲೇ ಮೇಲೆಳುತ್ತ ''ಒಂದೀಟ ಬಾಥರೂಮಿಗೆ ಹೋಗಿ ಬರತೇನಾ'' ಎಂದು ಹೊರಗೆ ಹೊರಟ.

ಇತ್ತ ದಿವ್ಯಾನಂದರ ದಿವ್ಯವಾಣಿ ಮೊಳಗುತ್ತಿತ್ತು ''ದ್ಯಾಟ್ ಪುಂಸಃ ಹೂ ಆಲ್‌ವೇಸ ಧ್ಯಾಯತೋ ವಿಷಯಾನ್ ಫಾರ್ ಹಿಮ್ ಸಂಗಸ್ತ ಪೂಪ ಜಾಯತೇ...''

''ಅಲ್ವೇ ಮತ್ತೆ... ಅಲ್ವೇ ಮತ್ತೆ'' ಅಂತ ಮುದಿಕಿ ''ಸೋಽಽನಿಂಗಾ'' ಹಾಡಿದಳು. ಪರಮೇಶಿ ಮರಳಿ ಬರುವಾಗ ಗಡಿಬಿಡಿಯಲ್ಲಿ ಒಬ್ಬಿಬ್ಬರ ಕಾಲು ತುಳಿದು ಅವರ ಶಾಪ ಸ್ವೀಕರಿಸುತ್ತ ನನ್ನ ಬಳಿ ಬಂದು'' ಶೀನೂ..ಶೀನಪ್ಪ ಅಲ್ಲೆ ಮುಂದಿನ ಸಾಲಿನ್ಯಾಗ ಯಲ್ಲಾರ ನಡುವ ಕುಂತಾನ ನೋಡು ಕೈಮುಕ್ಕೊಂಡು.. ಅವನ ...ಅವನ ಇನ್‌ಕಮ್‌ಟ್ಯಾಕ್ಷ ಕಮೀಶನರ್ ಸಾಹೇಬ್.. ಅವನ ಎದೂರಽ ನಮ್ಮ ಅಪೀಲ ನಡದೈತಿ..ಮನಿಶಾ ಭಾಳ ಧಾರ್ಮಿಕ ಅಂದರ ರಿಲೀಜಸ್ ಅದಾನಂತ..ಭಾಳ ಅಂದ್ರ ಭಾಳ: ಸಿಂಪಲ್ ಅದಾನಂತ..ಹೊರಗೆ ಮಂದಿ ಮತಾಡಾಕ ಹತ್ತಿದ್ದರು.... ಇಷ್ಟ ದೊಡ್ಡ ಕಮಿಶನರ್ ಸಾಬ ಆದರೂ ಬಗವತಗೀತಾ, ಮತ್ತ ಆ ಹುಡುಗ ಸ್ವಾಮಿ ಅಂದರ ಬಿದ್ದ ಸಾಯ್ತಾನಂತ....ವರಸಾ ತಾ ತಿಂದದ್ದರಾಗ ಅರ್ಧಕ್ಕರ್ಧ ಈ ಸ್ವಾಮಿ ಆಶ್ರಮಕ್ಕ ಕೊಡತಾನಂತ ಕಮೀಶನರ್ ಸ್ವತಃ ತಿಂದದ್ದರ ಅರ್ಧಕ್ಕರ್ಧ ಅಂದರ ಎಷ್ಟಾಕ್ಕೈತಿ ಏನ ಕಥಿ'' ಎಂದು ಇನ್ನೂ ಏನೇನೊ ಹೇಳುತ್ತಿದ್ದಾಗ ನಾನು ಬೇಸರಿಸಿ

''ಸರಿ ಮುಂದೇನು...''? ಎಂದೆ.

''ಮುಂದ ಏನಾರ ಹಾದಿ ತಗಿಯಾಕಬೇಕು...'' ಎಂದು ವಿಚಾರ ಮಗ್ನನಾದ.

ಇಷ್ಟೊತ್ತಿಗೆ ಆವತ್ತಿನ ಪ್ರವಚನ ಕೊನೆಗೊಂಡಿತು. ಇನ್ನೊಮ್ಮೆ ಆ ಶ್ವೇತವದನಾ ಸುರಸುಂದರಿ ಶಂಖಿಣಿ ದಿವ್ಯಾನಂದರ ಪಕ್ಕಕ್ಕೆ ಬಂದು ನಿಂತು ಶಂಖಾ ಹೊಡೆದಳು. ಆ ಮ್ಯಾಲೆ ಇನ್ನೊಬ್ಬ ಚಲುವೆ ಬಂದು ಒಳ್ಳೆಯ ಕಾನ್ವೆಂಟ ಇಂಗ್ಲೀಷಿನಲ್ಲಿ ''ನೌ ಆಟಿ'' ಎಂದಳು ಸಭೆಯೆಲ್ಲ ಸ್ತಬ್ಧವಾಯಿತು. ಪರಮೇಶಿ ಪಿಸುದನಿಯಲ್ಲಿ ''ಏನಂತಾಳು'' ಎಂದ ನನಗೂ ತಿಳಿದಿರಲಿಲ್ಲ'' ಆಟಿ'' ಎಂದರೆ ಏನಿರಬದುದೆಂದು ವಂಡರಿಸುತ್ತಿದ್ದೆ. ಪರಮೇಶಿ ಇನ್ನೊಮ್ಮೆ ಪಿಸುದನಿಯಲ್ಲಿ ''ಏನಂತ..ಆಟಿ'' ಅಂದ್ರ ಏನು ಎಂದು ಪಿಸುಗುಟ್ಟಿದ. ಈ ಧಾರವಾಡದವರ ಪಿಸುದನಿ ಅಂದ್ರ ಒಳ್ಳೆಯ ನಗಾರಿ ಹೊಡೆದವರಂಗ ಇರತದ. ನಮ್ಮ ಅಜ್ಞಾನಕ್ಕೆ ಮನಕರಗಿ ನಮ್ಮ ಪಕ್ಕದ ಮುದಿ ಮಲ್ಲೇಶ್ವರಿ ''ಇನ್ನ ಆರತಿ-ಸ್ವಾಮಿಗಳಿಗೆ ಆರತಿ ಮಾಡತಾರ'' ಎಂದು ತಿಳಿ ಹೇಳಿದಳು.

ಕಾನ್ವೆಂಟಿನ ಚಲುವೆ''ಸ್ವಾಮಿಗಳಿಗೆ ಆರತಿ ಮಾಡುವ ಹೆಮ್ಮೆಯ ಸೌಭಾಗ್ಯ ಅತಿಹೆಚ್ಚಿನ ದಾನಿಗಳಿಗೆ ಸಲ್ಲುವದೆಂದೂ.. ಹೀಗೆ ಹರಾಜಿನಲ್ಲಿ ಬಂದ ದಾನದಿಂದ ಜರ್ಮನಿಯ ಹಿಡಲಬರ್ಗದಲ್ಲಿ ಬಂದು ಭವ್ಯವಾದ'' ಗೀತಾಭವನ'' ಕಟ್ಟಿಸಲಾಗುವದೆಂದೂ ಮೈಕಿನಲ್ಲಿ ಹೇಳಿದಳು. ಇಡೀ ಸಭೆ ದಾನಿಗಳ ದಾರಿ ಕಾಯುತ್ತ ನಿಶಬ್ಧವಾಯಿತು,

★★★

ಮುಂದೆ ನಡೆದ ಘಟನೆಗಳು ಮಾತ್ರ ''ಕೀಲುಗುರ್‍ರಂ''ನ್ನೂ ಮೀರಿಸಿದ ವೇಗದಿಂದಲೂ ಅಸಂಬದ್ಧತೆಯಿಂದಲೂ ಸಾಗಿ ನನ್ನನ್ನು ದಿಕ್ಕೆಡಿಸಿದವು. ಭಾರತೀಯ ಆಧ್ಯಾತ್ಮದ ಹರಾಜು ನಾಲ್ಕುನೂರು, ಅಯಿದುನೂರೆಂದು ಮಂದಗತಿಯಿಂದ ನಡೆದಾಗ ಪರಮೇಶಿ ಒಮ್ಮಿಂದೊಮ್ಮೆಲೇ ಮೇಲೆದ್ದು''ಫಾಯಿವ ಥೌಸಂಡ ಫಾಯಿವ್ ಹಂಡ್ರೆಡ ಫಿಫ್ಟಿ ಒನ್'' ಅಂತ ಉಳ್ಳಾಗಡ್ಡಿ ಬಟಾಟಿ ಲಿಲಾವಿನ್ಯಾಗ ಒದರತಾರಲ್ಲ ಹಂಗ ಒದರಿ

ಬಿಟ್ಟ. ಸಭೆಯೆಲ್ಲ ಮೂಕವಿಸ್ಮಿತವಾಗಿ ನಮ್ಮತ್ತಲೇ ದೃಷ್ಟಿನೆಟ್ಟು ನೋಡತೊಡಗಿತು.

ಮಲ್ಲೇಶ್ವರಿ ಮೂಗಿನಲಿ ಬೆರಳಿಟ್ಟು ಮುಕುಟವನು ತೂಗುತ್ತ "ಅ..ಲ್ಲ..ವೇ..ಮ...ತ್ತೆ." ಎಂದುಸುರಿದಳು.

ಆಗ ದಿವ್ಯಾನಂದರು ಸುಂದರಿಯರ ತಂಡಕ್ಕೆ ಸನ್ನೆಮಾಡುತ್ತಲೂ ಇಬ್ಬರು ಶ್ವೇತವದನೆಯರಾದ ಮಾಧುರಿ ದೀಕ್ಷಿತರುಗಳು ಬಂದು ಪರಮೇಶಿಯ ಅಕ್ಕಪಕ್ಕದಲ್ಲಿ ನಡೆದು, ಅವನಿಗೆ ಬಗ್ಗಿ ಬಗ್ಗಿ ದಾರಿತೋರುತ್ತಾ ಅವನನ್ನು ವೇದಿಕೆಗೆ ಎಸ್ಕಾರ್ಟಸಿದರು. ಪರಮೇಶಿ ಈ ರೀತಿ ಮುಂದಗತಿಯಲ್ಲಿ ವೇದಿಕೆಯೆಡೆ ಸಾಗುತ್ತಿದ್ದಂತೆಯೇ ಸಭಾಂಗಣವೆಲ್ಲ ಎದ್ದುನಿಂತು ಹರ್ಷೋದ್ಗಾರ ಗೈಯುತ್ತಾ ಚಪ್ಪಾಳೆ ತಟ್ಟುತ್ತಾ ಅವನನ್ನು ಮೇಲೆಕ್ಕೆ ಸಾಗಿಸಿದರು.

ಈ ಮಧ್ಯೆ ವೇದಿಕೆಯ ಮೇಲೆ ಇನ್‌ಕಮ್ ಟ್ಯಾಕ್ಸ್ ಕಮಿಶನರ ಸಾಹೇಬರೂ ಒಂದಿಬ್ಬರು ಇತರೇ ಗಣ್ಯರೂ ದಿವ್ಯಾನಂದರ ಅಕ್ಕಪಕ್ಕದಲ್ಲಿ ಕೈಮುಗಿದು ನಿಂತಿದ್ದರು.

ಈಗ ಮಾತ್ರ ಪರಮೇಶಿ ತನ್ನ ಅಭಿನಯ ಚಾತುರ್ಯವನ್ನೆಲ್ಲ ಮೆರೆದ. ವೇದಿಕೆಯ ಮೇಲೆನಡೆದು ಅರ್ಧಕ್ಕೆ ಒಮ್ಮೆಲೇ ತಡೆದು ಎರಡೂ ಕೈಗಳಿಂದ ಕೆನ್ನೆ ಕೆನ್ನೆ ಬಡಿದುಕೊಂಡು ಮತ್ತೆ ಮರಳಿ ಬಂದು ಮೆಟ್ಟಿಲುಗಳ ಬಳಿ ತನ್ನ ಚಪ್ಪಲಿಗಳನ್ನು ಕಳಬಿಟ್ಟು. ಆ ಚಪ್ಪಲಿಗಳ ಕಡೆಗೆ ಕೆಂಗಣ್ಣಿನಿಂದ ನೋಡಿ ಏನೋ ಪುಟಪುಟಿಸಿ ಅವಕ್ಕೆ ಬೈದು. ಮತ್ತೆ ಕೆನ್ನೆ ಬಡಿದುಕೊಳ್ಳುತ್ತಾ ಮುಂದೆ ಬಂದು, ದಿವ್ಯಾನಂದರಿಗೆ ಸಾಷ್ಟಾಂಗವೆರಗಿಬಿಟ್ಟ. ಆಮೇಲೆ ಮೇಲೆದ್ದು ಇನ್‌ಕಮ್ ಟ್ಯಾಕ್ಸ ಕಮಿಶನರ್ ಸಾಹೇಬರನ್ನು ನೋಡಿ " ಇದೇನು ಸರ್...ನೀವು...ಇಲ್ಲಿ" ಎನ್ನುತ್ತ ಅವರಿಗೂ ಒಂದು ದೀರ್ಘ ಸಾಷ್ಟಾಂಗ ನಮಸ್ಕಾರವನ್ನು ತುಸು ಹೆಚ್ಚಾಗಿಯೇ ಬಿಗಿದು ಬಿಟ್ಟ. ಸಾಹೇಬರು ಪರಮೇಶಿಯನ್ನು ಮೇಲೆತ್ತಿ ಎದೆಗವಚಿಕೊಂಡು ಕಣ್ಣೊರೆಸಿಕೊಂಡರು.

ನಂತರ ಸುಮಾರು ಹೊತ್ತು ಜಾಗಟೆ ಶಂಖವಾದ್ಯಗಳ ನಡುವೆ ಆರತಿಯಾಯಿತು. ದಿವ್ಯಾನಂದರು ಪರಮೇಶಿಯ ಹೆಗಲಮೇಲೆ ಕೈಯಿಕ್ಕಿ ತಬ್ಬಿಕೊಂಡೇ, ಧ್ವನಿವರ್ಧಕದಲ್ಲಿ " ಮಿ. ಪರಮೇಶ್ವರಪ್ಪ ಪಾಟೀಲರು ಭಾರತೀಯ ಆಧ್ಯಾತ್ಮ ಜ್ಞಾನದ ಶ್ರೇಷ್ಠ ಪ್ರವರ್ತಕರಾಗಿದ್ದಾರೆ" ಎಂದು ಅಪ್ಪಣೆ ಕೊಡಿಸುತ್ತಿದ್ದಂತೆಯೇ ಹತ್ತೆಂಟು ಕ್ಯಾಮರಾಗಳು ಚಕಚಕಿಸುತ್ತಿದ್ದಂತೆ ಯೇ ಪ್ರಸಾದ ವಿತರಣೆಯ ನೂಕುನೂಗ್ಗಲು ಶುರುವಾಯಿತು.

ಅವತ್ತ ರಾತ್ರಿ ಪರಮೇಶಿಗೆ ನನಗ ತಪ್ಪಗಂಟಾಗಿ ಹೋತು. ಎಷ್ಟೊತ್ತು ಕಾದರೂ ಅವ ಶಿಗಲಿಲ್ಲ. ನಾನು ಮರಳಿ ಮನಗೆ ಬಂದೆ.

★★★

ಎರಡು ದಿವಸ ಬಿಟ್ಟು ಸಂಜೆ ಪರಮೇಶಿ ಮನೆಗೆ ಬಂದ ಒಳ್ಳೆಯ ಸಂತಸದಲ್ಲಿದ್ದ. ನಮಗೆಲ್ಲ ಸಿಹಿಹಂಚಿದ. ಎರಡು ದಿವ್ಸ ಇನ್‌ಕಮ್ ಟ್ಯಾಕ್ಷ ಸಾಹೇಬರ ಜತೆ ದಿವ್ಯಾನಂದರ ಆಶ್ರಮದಲ್ಲಿ ಕಳೆದದ್ದಾಗಿಯೂ, ಇವತ್ತೇ ಬೆಳಿಗ್ಗೆ ಸಾಹೇಬರು ತನ್ನ ಅಪೀಲನ್ನು ತನ್ನಂತೆಯೇ ಬರೆದುದ್ದಾಗಿಯೂ ಹೇಳಿದ. ಟೊಂಟಿ ಫ್ಹಾಯಿವದ ಮ್ಯಾಗ ಟ್ಯಾಕ್ಸ್

ಕೊಡೋದು ತಪ್ಪಿತೆಂದೂ ಮತ್ತು ಅದಕ್ಕಾಗಿ ಉಳಿವಿ ಬಸವಣ್ಣಗ ಹುಗ್ಗೀ ನೇವೇದ್ಯ ಮಾಡಸತೀನಂತೂ ಹೇಳಿದ.

ಅವನ ಕೈಯಲ್ಲಿ ಒಂದು ದೊಡ್ಡ ಬಂಡಲ್ ಇತ್ತು. ಅದನ್ನು ಕಂಡು ''ಇದೇನೋ ಪರಮೇಶಿ'' ಎಂದೆ.

''ಅದು... ಸ್ವಾಮೀಜಿ ಬರದದ್ದು''ಗೀತಾ'' ದ್ದ ಯಾವುದೋ ಪುಸ್ತಕ 'ನೀವು ತೊಗೊಂಡು ಪ್ರಚಾರ ಮಾಡಿರಿ ಅಂದರುSS. ಇರಲಿ ಒಂದ ಹಂಡ್ರೆಡ್ ಕಾಪಿ ಕೊಡ್ರಿ. ಕೈಲಾದಟ ಸೇವಾ ಮಾಡತೀನಿ ಅಂದೆ. ಬಳೇ ಪ್ಯಾಟ್ಯಾಗ ಒಂದ ಪುಸ್ತಕದಂಗಡಿಯವರು ಟೊಂಟಿ ಪರಸೆಂಟ್ ಡಿಸ್ಕೌಂಟಿಗೆ ತೊಗೊಂತಾರಂತ, ಹಾಗಿಂದ ಹಾಂಗ ಕೊಟ್ಟು ಸಂಜೀ ಬಸ್ಸಿಗೆ ಊರಿಗೆ ಹೋಗ್ತೇನಿ. ಬರ್ತೀ ಏನ ಬಿಡಾಕ?'' ಎಂದ.

'ಇಲ್ಲ... ನೀ ಹೋಗಿ ಬಾ'' ಎಂದೆ.

''ಯಾಕ ಬಾ ಅಲ್ಲSS ಹಂತಾದ್ದೇನು ಕೆಲಸೈತಿ'' ಎಂದ .

''ನನಗೆ ಅರ್ಜೆಂಟಾಗಿ ಈಗಿಂದೀಗ ''ಕೀಲುಗುರ್ರಂ'' ಕ್ಕ ಹೋಗಬೇಕಾಗೈತಿ'' ಎಂದೆ.

★★★



# ಸಿದ್ಧಾರ್ಥ ಬುದ್ಧನಾದ ದಿನ

ಶಿವು

ಅಂದು ವೈಶಾಖ ಶುಕ್ಲ ಪೂರ್ಣಿಮ ಆಗಿರಲಿಲ್ಲ. ಫಾಲ್ಗುಣ ಕೃಷ್ಣಚಥುರ್ಥಿ ಆ ದಿನ. ನಿಶಿರಾತ್ರಿಯಾದರೂ ಜಗವೆಲ್ಲ ಮಲಗಿರಲಿಲ್ಲ ಅಲ್ಲಲ್ಲಿ ಪಟಾಕಿಯ ಸದ್ದು ಕೇಳುತ್ತಲೇ ಇತ್ತು. ಸಿದ್ಧಾರ್ಥ ಮನೆಯ ವೆರಾಂಡದಲ್ಲಿ ಕುಳಿತಿದ್ದ.. ಅವನ ಕಣ್ಣುಗಳು ದಿಗಂತವನ್ನು ನಿಟ್ಟಿಸುತ್ತಿದ್ದವು. ಸಿದ್ಧಾರ್ಥನ ಮನೆಯಲ್ಲಿ ಕುಳಿತು ದಿಗಂತದತ್ತ ನಿಟ್ಟಿಸಿದರೆ ನಿಮ್ಮ ಕಣ್ಣಿಗೆ ಬೀಳುವುದು ಇದಿರುಮನೆಯ ಪೋಸ್ಟರ್ ಅಲಂಕೃತ ಗೋಡೆ. ಪೋಸ್ಟರಿನ ಮಾಧುರಿ ದೀಕ್ಷಿತ್, ಸಿದ್ಧಾರ್ಥನ ನೆಟ್ಟದೃಷ್ಟಿಯನ್ನು ಕುತೂಹಲದಿಂದ ಹಿಂತಿರುಗಿಸಿದರೂ, ಸಿದ್ಧಾರ್ಥನಿಗೆ ಅದರ ಪರಿವೆಯೇ ಇದ್ದಂತಿರಲಿಲ್ಲ. ಅವನ ಮನಸ್ಸು ಬೇರಾವುದೋ ಲೋಕದಲ್ಲಿತ್ತು. ವೈಶಾಖ ಶುಕ್ಲ ಪೂರ್ಣಿಮೆಯಂದು ಇನ್ನೊಬ್ಬ ಸಿದ್ಧಾರ್ಥ ಕಂಡುಕೊಂಡ ''ಆಸೆಯೇ ದುಃಖಕ್ಕೆ ಮೂಲ'' ಎಂಬ ನಿತ್ಯಸತ್ಯ ನಿಧಾನವಾಗಿ ಸಿದ್ಧಾರ್ಥನ ಮನದಲ್ಲಿ ನೆಲೆಸಿ ಅವನ ನಿರಾಶೆಯನ್ನು ಹತ್ತಿಕ್ಕಲು ಯತ್ನಿಸುತ್ತಿತ್ತು.

''ಅಂತೂ ಕೊನೆಗೆ ನಮ್ಮೋರೇ ಗೆದ್ರಲ್ಲ. ಟಿ.ವಿ.ಲೇ ಎಲ್ಲಾ ನೋಡ್ದೆ. ಜಡೇಜಾ ಎಷ್ಟು ಚೆನ್ನಾಗಿ ಆಡಿದಾರೀ. ಶೀಲಾ ಏನಂದ್ಲು? ಮ್ಯಾಚ್ ಚೆನ್ನಾಗಿತ್ತಂತ ಅವಳ್ಗೆ? ಇಲ್ಲೇ ಯಾಕ್ರಿ ಕೂತಿದ್ದೀರ? ಊಟ ಆಯ್ತ?'' ಯಶೋಧರೆ ಒಂದೇ ಉಸುರಿನಲ್ಲಿ ನಾಲ್ಕು ಪ್ರಶ್ನೆ ಕೇಳಿ ಸಿದ್ಧಾರ್ಥನನ್ನು ಅವನು ವಿಹರಿಸುತ್ತಿದ್ದ ಲೋಕದಿಂದ, ಈ ಅರ್ಥವಿಲ್ಲದ ಜಗಕ್ಕೆ ಎಳೆದುತಂದಳು.

''ಶೀಲಾ ತುಂಬಾ ಎಂಜಾಯ್ ಮಾಡಿದ್ಲು ಯಶು. ಅವಳ್ನ ಹೋಟೆಲ್‌ನಲ್ಲಿ ಬಿಟ್ಟು ನೇರವಾಗಿ ಇಲ್ಲಿಗೆ ಬಂದೆ. ಏನಾದ್ರು ಇದ್ಯಾ ತಿನ್ನುಕ್ಕೆ?''

''ಸ್ವಲ್ಪ ಹಾಗೇ ಕೂತಿರಿ. ಮೊಸರನ್ನ ಕಲಸಿಕೊಂಡು ಬರ್ತೀನಿ. ಪಕ್ಕದಮನೆ ಲಕ್ಷ್ಮಿ ಒಳ್ಳೆ ಮಾಕಳೀಬೇರು ಕಳಿಸಿದ್ದಾರೆ. ಊಟಮಾಡಿ ಮಲಗೋರಂತೆ. ಹೇಗಿದ್ರೂ ನಾಳೆ ರಜಾ ತಾನೆ. ನಿಧಾನವಾಗಿ ಏಳಬಹುದು'' ಯಶೋಧರೆ ಮೊಸರನ್ನ ಕಲಸಲು ಹೋದಳು.

ಸಿದ್ಧಾರ್ಥ, ಆ ದಿನದ ಆಗು ಹೋಗುಗಳನ್ನು ಮನಸ್ಸಿನಲ್ಲೇ ತಿರ್ಧುವಿ ಹಾಕುತ್ತಾ 'ಮೊಸರನ್ನದ ಹೊತ್ತಿಗಾದರೂ, ಮನಶ್ಯಾಂತಿಯನ್ನು ಪಡೆಯಲು ಪ್ರಾಮಾಣಿಕ ಯತ್ನನಡೆಸಿದ್ದ. ಇದಕ್ಕೆಲ್ಲಾ ಯಾವುದು ಮೂಲ ಕಾರಣ? ಹನ್ನೆರಡು ವರುಷಗಳ ಹಿಂದೆ ತಾನು ಕೆ.ಎಸ್.ಸಿ.ಎ.ಗೆ ಸದಸ್ಯನಾಗಿದ್ದೇ ತಪ್ಪೇ? ಅದರಲ್ಲೇನೂ ತಪ್ಪಿಲ್ಲ ಅಂದರೆ, ಅವರು ಕಳಿಸಿದ ಎರಡು ಪಾಸ್‌ಗಳನ್ನ ತಿಪ್ಪೇಗೆ ಎಸೀಬೇಕಾಗಿತ್ತೇ? ಹೋಗ್ಲಿ ಮೊನ್ನೆ ಆ ಸೇಲ್ಸ್‌ಟ್ಯಾಕ್ಸ್ ಅಧಿಕಾರಿಗೆ ಮೂರು ಸಾವಿರ ಲಂಚಕೊಟ್ಟು ಹಿಂದಕ್ಕೆ ಬರುತ್ತಿದ್ದಾಗ, ಆ ಬುಕ್‌ಸ್ಟಾಲ್ ಹತ್ತಿರ ಬೀಡಾಗೆ ನಿಂತಿದ್ದರಲ್ಲಿ ವಿಧಿಯ ಕೈವಾಡವೇನಾದರೂ ಇದ್ದಿರಬಹುದೇ? ಎಲ್ಲಿ, ಯಾವ ಹಂತದಲ್ಲಿ ತಾನು ಈ ನಿರಾಶೆನ

ತಪ್ಪಿಸಿಕೋಬಹುದಾಗಿತ್ತು? ಸಿದ್ಧಾರ್ಥನ ಮನಸ್ಸು, ಅವನ ಹೆಂಡತಿ ಆಸೆಪಟ್ಟುಕೊಂಡು ತಂದ ವಿಡಿಯೋಕಾನ್ ವಾಷಿಂಗ್ ಮೆಷೀನಿನಂತೆ ಗಿರ್ರನೆ ತಿರುಗುತ್ತಾ ಹಿಂದಿನ ಹಲವು ದಿನಗಳ ವಿದ್ಯಮಾನಗಳನ್ನು ನಿಷ್ಠುರವಾಗಿ ಪರಿಶೀಲಿಸುತ್ತಾ ಹೊರಟಿತು.

★ ★

ಸೇಲ್ಸ್‌ಟ್ಯಾಕ್ಸ್ ಆಫೀಸಿನಿಂದ ಹಿಂತಿರುಗಿ ಬರುವಾಗ, ಸಿದ್ಧಾರ್ಥನ ನಡಿಗೆಯಲ್ಲಿ ಒಂದು ಅಪರೂಪವಾದ ಹಗುರತೆ ಇತ್ತು. ಸಧ್ಯ, ಆ ಅಧಿಕಾರಿ ಲಂಚ ತಗೊಂಡರೂ, ನಿಯತ್ತಿನಿಂದ ಕೇಸನ್ನು ಕ್ಲೋಸ್ ಮಾಡಿದನಲ್ಲ. ಪೆನಾಲ್ಟಿ ಗಿನಾಲ್ಟಿ ಹಾಕಿದ್ರೆ ಲಂಚದ ಹತ್ತರಷ್ಟು ಹಣ ಕಕ್ಕಬೇಕಾಗಿರೋದು ಅಂದ್ಕೊಳ್ತಾ ಸಿದ್ಧಾರ್ಥ ಗಾಂಧಿನಗರದಲ್ಲಿ ನಡ್ಕೊಂಡು ಬರುತ್ತಿದ್ದ. ದಾರಿಯಲ್ಲಿ ಬಲಗಡೆ ಒಂದು ಬೀಡಾ ಕಂ ಮ್ಯಾಗಜೀನ್ ಅಂಗಡಿ ಕಣ್ಣಿಗೆ ಬಿತ್ತು. Small pleasures in life, ಒಂದು ಮೀಠಾ ಬೀಡಾ ಏರಿಸೋಣ ಅಂತ ಸಿದ್ಧಾರ್ಥ ಆ ಅಂಗಡಿ ಹತ್ರ ನಿಂತ. ಬೀಡಾ ರೆಡಿ ಆಗ್ತಾ ಇದ್ದಾಗ, ಸಿದ್ಧಾರ್ಥನ ದೃಷ್ಟಿ ಆ ಅಂಗಡಿಯ ಮುಂದೆ ತೋರಣದಂತೆ ಸಾಲಾಗಿ ಕಟ್ಟಿದ್ದ ಮ್ಯಾಗಜೀನ್‌ಗಳ ಕಡೆ ಸರಿಯಿತು. ಸಿನಿಮಾ ಚೆಲುವೆಯರ ವಿವಿಧ ಭಂಗಿಗಳನ್ನು ತೊಟ್ಟ ಮುಖ ಪುಟಗಳ ರಾಶಿಯಲ್ಲಿ ಹೊಸ ಪತ್ರಿಕೆಯೊಂದು ಸಿದ್ಧಾರ್ಥನ ಗಮನವನ್ನು ಸೆಳೆಯಿತು. ಇಂಡಿಯಾ ಟುಡೇ ಪ್ಲಸ್ ಎಂಬ ಹೆಸರಿನ ಆ ಪತ್ರಿಕೆಯ ಮುಖ ಪುಟದಲ್ಲಿ ಒಬ್ಬಳು ಕೆದರು ಕೇಶಿನಿ, ಸಿಗಾರ್ ಹಿಡಿದು ಹುಚ್ಚು ನಗು ನಗುತ್ತಿದ್ದಳು. ಬೇಸಿಗೆಯ ಬಿಸಲಿಗೋ ಏನೋ ಚೆನ್ನಾಗಿ ಗಾಳಿ ಆಡುವಂತೆ ಲೋನೆಕ್ ಮಿನಿ ಫ್ರಾಕ್ ಧರಿಸಿದ್ದಳು ಆ ನಗುಸರಸಿ. ಅವಳ ಪಕ್ಕದಲ್ಲಿ ಒಂದು ಶೀರ್ಷಿಕೆ. ""Are successful men more likely to have an affair?" ಬೀಡಾ ಜಗಿಯುತ್ತಾ ಸಿದ್ಧಾರ್ಥ ತನ್ನ ನಡಿಗೆಯನ್ನು ಮುಂದುವರಿಸಿದಾಗ, ಅವನಿಗೆ ಆ ಪತ್ರಿಕೆಯ ಸಂಪಾದಕ ವರ್ಗದ ಮೇಲೆ ನಿಜಕ್ಕೂ ಕೋಪ ಬಂದಿತ್ತು. ಇಂಡಿಯಾ ಟುಡೇ ಇದ್ದದ್ದರಲ್ಲಿ ಸ್ವಲ್ಪ ಸತ್ಯಕ್ಕೆ ಹತ್ತಿರವಾದ ಸಂಗತಿ ಹೇಳುತ್ತೆ ಅಂದ್ಕೊಂಡಿದ್ದೆ. ಹೀಗೆಲ್ಲಾ ಬೊಗಳೆ ಯಾಕೆ ಬರೀತಾರೆ? ಈ ಕಟ್ಟುನಿಟ್ಟಿನ ಸಪ್ರೆಸ್ಡ್ ಸಮಾಜದಲ್ಲಿ ಯಾರಾದ್ರೂ ಅಫೇರ್ಸ್ ಇಟ್ಕೊಳ್ಳೋಕೆ ಅವಕಾಶ, ವ್ಯವಧಾನ ಇರುತ್ತೇ? ಯಾವ್ದೊ ಮದುವೆ ಮನೇಲಿ, ಸ್ವಲ್ಪ ಚೆನ್ನಾಗಿರೋ ಮಹಿಳೆಗೆ ನಗುನಗ್ತಾ ''ನಮಸ್ಕಾರಮ್ಮಾ'' ಅಂದ್ಬಿಟ್ರೆ ಸಾಕು ರಾತ್ರಿಯೆಲ್ಲಾ ಹೆಂಡ್ತಿಯ ಪಾಟಿಸವಾಲು. ''ಯಾಕೆ ಅಷ್ಟು affectionate ಆಗಿ ನಮಸ್ಕಾರಾ ಅಂದ್ರಿ'' ''ಯಾವಾಗಿಂದ ಗೊತ್ತು ಆಕೆ?'' ಹೀಗೆ ನೂರಾರು ಪ್ರಶ್ನೆಗಳು. ಎಲ್ಲಾ ಭಾರತೀಯ ಗಂಡಸರ ಹಣೇಬರಹಾನೂ ಇಷ್ಟೇ. ಅಂಥಾದ್ದರಲ್ಲಿ ಅಫೇರೆ! ಯಾವ್ದೊ ಕನಸಿನ ಲೋಕದಲ್ಲಿದ್ದಾರೆ ಈ ಪತ್ರಿಕೆಯೋರು. Successful men ಅಫೇರ್ ಇಟ್ಕೋತಾರೆ ಅಂತಾರಲ್ಲ. ನಾನೇನು Successful ಅಲ್ವೇ. ಮೂರು ಸಾವಿರ ಲಂಚಾನೇ ಕೊಟ್ಟಿದೀನಿ. ಯಾವ ರಂಭೆ ಕಾದಿದಾಳೆ ನನ್ಜೊತೆ ಅಫೇರ್ ನಡೆಸೋಕ್ಕೆ. ಹ್ಹ ಹ್ಹ ಹ್ಹ ಒಳ್ಳೇ ಕಲ್ಪನಾ ವಿಲಾಸಿ ಯಾವೊನೋ ಬರ್ದಿರ್ಬೇಕು ಆ ಲೇಖನಾನ ಅಂದ್ಕೊಳ್ತಾ ಸಿದ್ಧಾರ್ಥ ತನ್ನ ಮಾರುತಿ ಹತ್ರ ಬಂದ. ಕಾರು ಇದ್ದಲ್ಲೇ ಇತ್ತು. ಕಾರು ಹತ್ತಿ ಸಿದ್ಧಾರ್ಥ ಮನೆಗೆ ಹೊರಟ.

ಮನೆ ಹೊರಗೆ ಯಾವ್ದೋ ಪ್ರೈವೆಟ್ ಟ್ಯಾಕ್ಸಿ ನಿಂತಿತ್ತು. ದಿನವೆಲ್ಲಾ ದುಡಿದು ಬಂದು ಸಂಜೆ ಉಸ್ಸಪ್ಪಾ ಅಂತ ಕಾಫಿ ಕುಡೀತಾ ಬಿ.ಬಿ.ಸಿ. ನ್ಯೂಸ್ ಕೇಳೋಣ ಅಂದ್ರೆ ಇದ್ಯಾರೋ ವಕ್ಕರಿಸಿದಾರಲ್ಲಾಪ್ಪಾ ಅಂದ್ಕೊಳ್ತಾನೇ ಸಿದ್ಧಾರ್ಥ ಮನೆ ಪ್ರವೇಶಿಸಿದ. ಯಶೋಧರೆ ಯಾವುದೋ ಕೋಕಿಲ ಕಂಠದೊಡನೆ ಮಾತನಾಡುತ್ತಿದ್ದುದು ಕಿವಿಗೆ ಬಿತ್ತು. ಸಿದ್ಧಾರ್ಥನ ಕಾರಿನ ಸದ್ದು ಕೇಳಿ ಯಶೋಧರೆಯೇ ಬಂದು ಬಾಗಿಲು ತೆರೆದಳು.

''ನನ್ನ ಹಳೇ ಕ್ಲಾಸ್‌ಮೇಟ್ ಶೀಲಾ ಬಂದಿದಾಳೆ ರೀ. ಡಲ್ಲಾಸ್‌ನಲ್ಲಿ ಕೆಲಸ. ಕಾನ್ಫರೆನ್ಸ್‌ನಲ್ಲಿ ಭಾಗವಹಿಸೋಕ್ಕೆ ಅಂತ ಬೆಂಗಳೂರಿಗೆ ಬಂದಿದಾಳೆ. ಬನ್ನಿ ಇನ್‌ಟ್ರೊಡ್ಯೂಸ್ ಮಾಡಿಸ್ತೀನಿ''

ಒಳಗೆ ಹೋದನಂತರ,

''ಶೀಲಾ ಮೀಟ್ ಮೈ ಹಬ್ಬೀ ಸಿದ್ಧಾರ್ಥ. ಇದು ಶೀಲಾ ನನ್ನ ಬಾಲ್ಯದ ಗೆಳತಿ. ಈಗ famous Scientist from ಡಲ್ಲಾಸ್''

''ಓಹ್ ಸಿದ್ಧಾರ್ಥ - ಯಶೋಧರೆ, How appropriate ರಾಹುಲ ಎಲ್ಲಿ?''

''ಇನ್ನೂ ಸದ್ಯಕ್ಕೆ ಇಲ್ಲಮ್ಮಾ. Next December ಗೆ ಪ್ಲಾನ್ ಮಾಡ್ತಾ ಇದ್ದೀವಿ. ಏನಾಗುತ್ತೋ ನೋಡಬೇಕು ಅದಿರ್ಲಿ, ಸಿದ್ಧಾರ್ಥ ಸ್ವಲ್ಪ ಶೀಲಾನ ಮಾತಾಡಿಸ್ತಿರು, ಎಲ್ಲರಿಗೂ ಟೀ ತಂದ್ಬಿಡ್ತೀನಿ'' ಯಶೋಧರೆ ಒಳಕ್ಕೆ ನಡೆದಳು.

''ಯಾವಾಗ ಬಂದಿರಿ ಶೀಲಾ? ಡಲ್ಲಾಸ್‌ನಲ್ಲಿ ಏನು ಕೆಲಸ ಮಾಡ್ತಾ ಇದ್ದೀರಾ?''

''ಒಂದು ವಾರ ಆಯ್ತು ನಾನು ಬಂದು ಸಿದ್ಧಾರ್ಥ, ಮಾಲೆಕ್ಯುಲಾರ್ ಬಯಾಲಜಿ ಮೇಲೆ ಒಂದು ಸಿಂಪೋಸಿಯಂ ಇತ್ತು ಐ.ಐ.ಎಸ್.ಸಿ. ನಲ್ಲಿ ಅದಕ್ಕೋಸ್ಕರ ಬಂದಿದ್ದೆ. ಸಿಂಪೋಸಿಯಂ ಮುಗಿದ ತಕ್ಷಣ ಯಶುನ ಕಾಂಟಾಕ್ಟ್ ಮಾಡ್ದೆ. ನೀವೇನು ಮಾಡ್ತಾ ಇದ್ದೀರಿ?''

ಶೀಲಾ ತುಂಬಾ ಸರಳತೆಯಿಂದ ಮಾತನಾಡುತ್ತಿದ್ದಳು. ಸ್ವಲ್ಪವೂ ಬಿಗುಮಾನ ಇರಲಿಲ್ಲ.

''ನಾನೊಂದು ಜುಜುಬಿ ವರ್ಕ್‌ಷಾಪ್ ಇಟ್ಕೊಂಡಿದೀನ್ರಿ. ಮಾಲೆಕ್ಯೂಲ್ ಅಂದ್ರೆ ಏನು ಅಂತ ಕೂಡ ಸುತರಾಂ ತಿಳೀದು''

''ಮಾಲೆಕ್ಯೂಲ್ ಗೊತ್ತಿಲ್ದೇ ಇದ್ರೆ ಪರವಾಗಿಲ್ಲ. ಬಯಾಲಜಿ ಗೊತ್ತು ತಾನೆ. ಪಾಪ ಯಶು ಏನೇನೋ ಪ್ಲಾನ್ ಹಾಕ್ಕೊಂಡಿದಾಳೆ''

ಅರೆ, ಪರವಾಗಿಲ್ವೇ ಅಮೆರಿಕನ್ ಛಮಕ್ ಅಂದ್ಕೊಂಡ ಸಿದ್ಧಾರ್ಥ.

''ಹ್ಹ ಹ್ಹ ಹ್ಹ ಮನೇ ವ್ಯವಹಾರಾನೆಲ್ಲಾ ನಾನು ಯಶುಗೇ ಬಿಟ್ಬಿಟ್ಟಿದ್ದೀನಿ. ಏನಿದ್ರೂ ದುಡಿದು ತಂದ್ಹಾಕೋದು, ಅಲ್ಲಿ ಇಲ್ಲಿ ಅಲೆದಾಡ್ಕೊಂಡು ಬರೋದು ಇಷ್ಟೇ ನನ್ನ ಕೆಲಸ. ಈಗಂತೂ ಎರಡು ವಾರಗಳಿಂದ ಕ್ರಿಕೆಟ್ ಫೀವರ್ ಹಾಡಿದ್ದು ಬೆಂಗಳೂರಿನಲ್ಲಿ

ಕ್ವಾರ್ಟರ್ ಫೈನಲ್ಸ್ ಅದೂ INDIA vs PAKISTAN..." ಅಂತ ಹೇಳ್ತಾ ಇದ್ದಾಗ ಯಶೋಧರೆ ಒಂದು ಟ್ರೇನಲ್ಲಿ ಮೂರು ಖಾಲಿ ಟೀ ಕಪ್ಪುಗಳು, ಒಂದು ಪಿಂಗಾಣಿ ಪಾಟ್‌ನಲ್ಲಿ ರೆಡಿಮಿಕ್ಸ್ಡ್ ಟೀ, ಒಂದು ಸಕ್ಕರೆ ಬಟ್ಟಲು ಎಲ್ಲವನ್ನೂ ಪಾರಣವಾಗಿ ಜೋಡಿಸಿಕೊಂಡು, ಮಧ್ಯೆ ಇದ್ದ ಟೇಬಲ್ಲಿನ ಮೇಲಿಟ್ಟಳು.

ಶೀಲಾ, ಟೀ ಕುಡಿಯುತ್ತಾ,

"How wonderful ಕ್ರಿಕೆಟ್ ಅಂದ್ರೆ ನನಗೆ ಪ್ರಾಣ. ಅದೂ ಇಂಡಿಯಾ ಪಾಕಿಸ್ಥಾನದ ಮ್ಯಾಚ್ ಫ್ಲಡ್‌ಲೈಟ್‌ನಲ್ಲಿ ಆಡ್ತಾರಂತೆ. ಟಿಕೆಟ್ ಸಿಗುತ್ತಾ ಅಂತ ನಾನು ಹೋಟೆಲ್‌ನಲ್ಲಿ ವಿಚಾರಿಸ್ದೆ. Impossible ಅಂದ್ಬಿಟ್ರು. ಟಿ.ವಿ.ಲೇ ನೋಡ್ಬೇಕಾಗುತ್ತೇನೋ. ಆದ್ರೂ ಸ್ಟೇಡಿಯಂನಲ್ಲಿ ಕೂತು ಆ ಕ್ರೌಡು, ಆ ಉತ್ಸಾಹ, ಸಂಭ್ರಮ ಇದನ್ನೆಲ್ಲಾ ಸವಿಯೋದಕ್ಕೆ ಪುಣ್ಯ ಮಾಡಿರಬೇಕು. ಸಿದ್ಧಾರ್ಥ್ ನೀವೇನಾದ್ರೂ ಇನ್‌ಫ್ಲೂಯನ್ಸ್ ಮಾಡಿ ನನಗೆ ಒಂದೇ ಒಂದು ಟಿಕೆಟ್ ಕೊಡಿಸುಕ್ಕೆ ಆಗುತ್ತೇನು? ಎಷ್ಟು ಖರ್ಚಾದ್ರೂ ಪರವಾಗಿಲ್ಲ.''

ನಾಡಿದ್ದು ಮ್ಯಾಚು ಇರೋವಾಗ ಇವತ್ತು ಟಿಕೆಟ್ ಬೇಕಂತೆ ಈ ರಂಭೇಗೆ ಎಲ್ಲೋ ಕನಸು ಕಾಣ್ತಾ ಇರ್ಬೇಕು. ಅಂತ ಸಿದ್ಧಾರ್ಥ ಅಂದ್ಕೊಳ್ತಾ ಇದ್ದಾಗ ಯಶೋಧರೆ ಮಧ್ಯೆ ಬಾಯಿಹಾಕಿ,

''ಶೀಲಾ My dear, you are my best friend ಅದಕ್ಕೆ ನಾನು ನಿನಗೋಸ್ಕರ ಒಂದು ಸುಪ್ರೀಂ ಸ್ಯಾಕ್ರಿಫೈಸ್ ಮಾಡುಕ್ಕೆ ಸಿದ್ಧ. ಸಿದ್ಧಾರ್ಥನಿಗೆ ಎರಡು ಪಾಸ್ ಬಂದಿದೆ. ನಾವಿಬ್ರೂ ಹೋಗೋಣಾ ಅಂದ್ಕೊಂಡಿದ್ವೀ. ನನಗೇನು ಕ್ರಿಕೆಟ್ ಖಯಾಲಿ ಇಲ್ಲ, ಸುಮ್ನೆ Outing ಆಗುತ್ತೆ ಅಂದ್ಕೊಂಡಿದ್ದೆ. ನೀನು ಅಷ್ಟು ಕೀನ್ ಆಗಿದ್ರೆ, ಸಿದ್ಧಾರ್ಥ ನಿನ್ನ ಕರ್ಕೊಂಡು ಹೋಗ್ತಾರೆ. ಏನ್ಹೇಳ್ತಿ ಸಿದ್ಧಾರ್ಥ್''

ಈ Unexpected catchನ ಸಿದ್ಧಾರ್ಥ ಕುಂಬ್ಳೆತರಹ ಹಿಡಿದ. ''ಶೀಲಾನ ಕ್ರಿಕೆಟ್ ಮ್ಯಾಚಿಗೆ ಕರ್ಕೊಂಡು ಹೋದ್ರೆ ಇದ್ಯಾರೋ ಸಿನಿಮಾ ನಟಿ ಬಂದಿದಾಳೆ ಅಂತ ನಮ್ಮನ್ನ ಜನ Mob ಮಾಡೋದು ಖಂಡಿತ. ಆದ್ರೆ, ಯಶು, I am also prepared for the supreme sacrifice!"

''ಹಾಗಾದ್ರೆ ಶನಿವಾರ ಬೆಳಗ್ಗೆ ಇಲ್ಲಿಗೇ ಬಂದ್‌ಬಿಡ್ತೇನೆ. ಓಹ್ ಎಂತಹ ಅದೃಷ್ಟ ನನ್ನದು. ಯಶು, Are you sure you don't mind? ಶೀಲಳ ಪ್ರಶ್ನೆಯಲ್ಲಿ ಪ್ರಾಮಾಣಿಕ ಕಾತರವಿತ್ತು.

''ಶೀಲಾ, ಸಿದ್ಧಾರ್ಥ ನಿನ್ನ ಜೊತೆ ಹೋದ್ರೆ, ಒಂದು ದಿನ ಆದ್ರೂ ನಾನು ಪೀಸ್‌ಫುಲ್ ಆಗಿ ಇರಬಹುದು. Enjoy yourself" ಅಂದಳು ಯಶೋಧರೆ.

ಸಿದ್ಧಾರ್ಥ ಚಕಿತನಾಗಿ ಕುಳಿತಿದ್ದ.

★★★

ಸಿದ್ಧಾರ್ಥನಿಗೆ ತನ್ನ ಪರಿಸ್ಥಿತಿಯ ಸುಪ್ತ ಸಾಧ್ಯತೆಗಳ ಬಗ್ಗೆ ಒಂದು ವಿರಾಟ್

ನೋಟಸಿಕ್ಕಿದ್ದು, ಶೀಲಾ ಒಂದು Coke ಕೇಳಿದಾಗ.

''ಸಿದ್ದು, I would love to have a coke. I am feeling so thirsty"

ಅಲ್ಲೊಬ್ಬ ಸಿದ್ದು, ಇಲ್ಲೊಬ್ಬ ಸಿದ್ದು ಅಂದ್ಕೊಳ್ತಾ ಸಿದ್ಧಾರ್ಥ ಶೀಲಾಗೆ coke bottle ತಂದು ಕೊಟ್ಟ.

ಸಿದ್ದು ಬೌಂಡರಿ ಹೊಡೆದ. ಜನಸ್ತೋಮ ಹೋ ಎಂದು ಭೋರ್ಗರೆಯಿತು.

""What a fine player, this ಸಿದ್ದು!'' ಶೀಲಾ ಉದ್ಗರಿಸಿದಳು.

''ಅದೆಲ್ಲಾ ಹೆಸರಿನ ಮಹಾತ್ಮೆ. ಈಗ್ಲಾದ್ರೂ ಗೊತ್ತಾಯ್ತು ಷೇಕ್ಸ್‌ಪಿಯರ್ ಪೆದ್ದು ಅಂತ'' ಸಿದ್ಧಾರ್ಥ ಒಂದು ಗೂಗ್ಲಿ ಬೋಲ್ ಮಾಡ್ದ.

""A rose is a rose even if it is escorted by a charming ಸಿದ್ದು'' ಶೀಲಾ ಬಾಲ್‌ನ ಚೆನ್ನಾಗಿ ಮಿಡಲ್ ಮಾಡಿದ್ಲು.

ಸಚಿನ್ ಇನ್ನರ್ ಎಡ್ಜ್‌ನಿಂದ ಬಾಲ್‌ನ ನೇರವಾಗಿ ವಿಕೆಟ್‌ಗೆ ಹೊಡೆಯೋ ಹೊತ್ತಿಗೆ ಸಿದ್ಧಾರ್ಥನಿಗೆ, ಕ್ರಿಕೆಟ್ ಮ್ಯಾಚ್‌ನಲ್ಲಿದ್ದ ಆಸಕ್ತಿ ಪೂರ್ತಿ ಆವಿಯಾಗಿತ್ತು. ಇಂಡಿಯಾ ಟುಡೇ ಪ್ಲಸ್‌ನೋರು ಅಷ್ಟೇನು ಪೆದ್ದರಲ್ಲ. ಹ್ಯೂಮನ್ ಸೈಕಾಲಜೀನ ಚೆನ್ನಾಗಿ ಅಭ್ಯಾಸ ಮಾಡಿದಾರೆ ಅಂತ ಸಿದ್ದು ಅಂದ್ಕೊಳ್ತಾ ಇದ್ದಾಗ, ವಕಾರ್ ಯೂನುಸ್ ದೂರದಿಂದ ರಾಕ್ಷಸನಂತೆ ಬೋಲ್ ಮಾಡುಕ್ಕೆ ಓಡಿಬರ್ತಾ ಇದ್ದ, ವಕಾರ್ ಹೀಗೆ ಬರ್ತಾ ಇದ್ದಾಗಲೆಲ್ಲಾ ಶೀಲಾ ಸಿದ್ಧಾರ್ಥನ ಕೈಯನ್ನು ಕಾತರದಿಂದ ಅದುಮಿ ಹಿಡಿಯುತ್ತಿದ್ದಳು. ವಕಾರ್‌ಗೆ ರೆಗ್ಯುಲೇಷನ್ ಹತ್ತು ಓವರ್ ಬದಲು ಹದಿನೈದು ಕೊಟ್ಟಿದ್ದರೆ ಸಿದ್ಧಾರ್ಥನದೇನೂ ಅಭ್ಯಂತರವಿರುತ್ತಿರಲಿಲ್ಲ.

ಇಂಡಿಯ 287 ರನ್ ಮಾಡಿ, ನಾಷ್ಟಾ ಮಾಡಲು ಪವಿಲಿಯನ್‌ಗೆ ಹೋಗುವ ಹೊತ್ತಿಗೆ ಶೀಲಾ ಸಿದ್ಧಾರ್ಥರ ನಡುವೆ ಸಲುಗೆ ಬೆಳೆದು ಬಂದಿತ್ತು.

''ಸಿದ್ದು, ನನಗೆ ಅಸ್ಟ್ರಾಲಜಿಲಿ ಬಹಳ ನಂಬಿಕೆ. ಇವತ್ತು ಬೆಳಗ್ಗೆ ನನ್ನ ದಿನ ಭವಿಷ್ಯ ನೋಡಿದೆ. ಅಂದ ಹಾಗೆ ನನ್ನ ಸ್ಟಾರ್‌ಸೈನ್ ಸ್ಯಾಜಿ. ಭವಿಷ್ಯ ಏನಿತ್ತು ಗೊತ್ತಾ?''

''ಏನಿತ್ತು?''

""Romantic adventure with a Taurian ಅಂತ ಇತ್ತು. ಅಂದಹಾಗೆ ನಿನ್ನ ಸ್ಟಾರ್‌ಸೈನ್ ಯಾವ್ದು ಸಿದ್ದು?''

ಈ ಲೆಗ್ ಕಟರ್ ತೀರಾ ವೈಡ್ ಆಗಿತ್ತು. ಬ್ಯಾಟ್ ಟಚ್ ಆದ್ರೆ ಡೇಂಜರ್ ಅಂತ ಸಿದ್ದುಗೆ ತಿಳಿದಿತ್ತು. ಅವನೇನು ನಿನ್ನೆ ಹುಟ್ಟಿರಲಿಲ್ಲ. ಈಗಲೇ ಏನಾದ್ರೂ ಹೇಳಿ ಕೆಲಸ ಕೆಡಿಸೋ ಬದಲು, ಮ್ಯಾಚ್ ಮುಗಿಯೋವರೆಗೂ Options ನ Open ಆಗಿ ಇಟ್ಟುಕೊಂಡಿರೋದು ವಾಸಿ ಅಂದ್ಕೊಂಡು,

''ನನಗೆ ಇದರಲ್ಲೆಲ್ಲಾ ನಂಬಿಕೆ ಇಲ್ಲ ಶೀಲಾ ನನ್ನ ಸ್ಟಾರ್‌ಸೈನ್ ನನಗೇ ಗೊತ್ತಿಲ್ಲ. ಅದಿರ್‍ಲಿ ಈ ಮ್ಯಾಚ್‌ನಲ್ಲಿ ಯಾರು ಗೆಲ್ಲಬಹುದು ಹೇಳು ನೋಡೋಣ''

"ಇಂಡಿಯಾನೇ ಗೆಲ್ಲೋದು. I feel it is my bones. ನೀನೇನ್ಹೇಳ್ತೀಯಾ?"

"Let's wait & see" ಅಂದ ನಾನ್‌ಕಮಿಟಲ್ ಸಿದ್ದು.

ಇಂಡಿಯಾ ಗೆಲ್ಲುವ ಸ್ಥಿತಿ ಬಂದಾಗ ಶೀಲಳ ಕಾತರ ಹೇಳುಕ್ಕಿಲ್ಲ. ಅಮೆರಿಕನ್ ಸಮಾಜದ ಸ್ವಚ್ಛಂದ ಮುಗ್ಧ ನಡವಳಿಕೆ ಉತ್ತುಂಗ ಶಿಖರವನ್ನೇರಿದ್ದು ಕೊನೆಗೆ ಇಂಡಿಯಾ ಗೆದ್ದಾಗ. "Oh, I am so thrilled!"ಅನ್ನುತ್ತಾ ಶೀಲಾ ಸಿದ್ಧಾರ್ಥನಿಗೆ sisterly hug ಕೊಟ್ಟಳು.

A hug is a hug is a hug ಅಂದ್ಕೊಂಡ ಸಿದ್ಧಾರ್ಥ.

ಹೋಟೆಲ್‌ಗೆ ಕಾರಿನಲ್ಲಿ ಹಿಂತಿರುಗುವಾಗ ಶೀಲಾ, "That siddu is the man of the match. This siddu is the man of my heart. It was so very nice of you ಸಿದ್ದು. ನೀನು ನನ್ನನ್ನ ಕರ್ಕೊಂಡು ಬರ್ದೇ ಇದ್ರೆ I would have missed a chance of a life time!" ಅಂದಳು. ಅಷ್ಟು ಹತ್ತಿಗೆ ಸಿದ್ಧಾರ್ಥನ ಮಾರುತಿ ಹೋಟೆಲಿನ ಪಾರ್ಕಿಂಗ್ ಆವರಣದಲ್ಲಿ ನಿಂತಿತು. This is the crucial moment. ಹೋಟೆಲ್ ಲಾಬಿಗೆ ಹೋದಮೇಲೆ ಶೀಲಾಳನ್ನು ""Would you like to have dinner?" ಅಂತ ಕೇಳಿ ಅವಳಿಂದ ""How wonderful" ಎಂಬ ಉತ್ತರ ಪಡೆದು, ಅದೇ ಹೋಟೆಲಿನ ರೆಸ್ಟುರಾದಲ್ಲಿ ತಮ್ಮಿಬ್ಬರನ್ನು ಪ್ರತಿಷ್ಠಾಪಿಸಿಕೊಳ್ಳುವುದು ಸಿದ್ದುವಿನ ಮೊದಲ ಕೆಲಸವಾಗಿತ್ತು. One task at a time ಅಂದ್ಕೊಳ್ತಾ ಸಿದ್ದು ಶೀಲಾಳ ಬದಿಯ ಬಾಗಿಲು ತೆಗೆದ. 'ಥ್ಯಾಂಕ್ಯು' ಅನ್ನುತ್ತಾ ಶೀಲಾ ಧರೆಗಿಳಿದಳು.

ಹೋಟೇಲಿನ ರಿಸೆಪ್ಷನ್‌ನಲ್ಲಿ ಶೀಲಾ ತನ್ನ ರೂಮ್‌ಕೀ ಪಡೆಯುತ್ತಿದ್ದಾಗ ಸಿದ್ಧಾರ್ಥ ಅನತಿ ದೂರದಲ್ಲಿ ನಿಂತಿದ್ದ. ಅಷ್ಟು ಹೊತ್ತಿಗೆ ಹೋತನ ಗಡ್ಡದ ಕೆಂಪುಮೂತಿಯೊಬ್ಬ ""Hai Sheela, How was the match?" ಅನ್ನುತ್ತಾ ಹತ್ತಿರ ಬಂದ.

ಶೀಲಾ "Siddu, This is tom, my collegue. He is also here for the symposium. Tom, This is my charming escort Siddu"

ಅಂತ ಇಬ್ಬರನ್ನೂ ಪರಿಚಯಿಸಿದ್ದಳು

ಟಾಮ್ "Sheela, our table is ready & waiting. Would your friend like to join us for dinner" ಅಂತ ಸೌಜನ್ಯದಿಂದ ಕೇಳಿದ.

ಸಿದ್ಧಾರ್ಥ, "No Tom, Thanks for the invitation but I really must go. However can I ask you a question? ಅಂತ ಕೇಳಿದ.

""Fire away. It will be my pleasure" ಅಂದ ಸೌಜನ್ಯ ಮೂರ್ತಿ

""May I know your star sign?"

""Oh! what a funny question. I am a Taurian. Why?"

""It is just a hobby of mine. I write down the star signs of all the people I meet in my little diary. Good bye Tom, bye Sheela" ಅಂತ ವಿದಾಯ ಹೇಳಿ ಸಿದ್ಧಾರ್ಥ ಮನೆಗೆ ಹೊರಟ.

★★★

# ಕಂಪ್ಯೂಟರ್ ಗಾದೆಗಳು

 ಫ್ಲಾಪಿ ಕೊಡೋ ಪಾಪಿ ಅಂದ್ರೆ ಕೊಸರಿಗೆ ವೈರಸ್ ಕೊಟ್ನಂತೆ

 ಮೊಮೊರಿಗೆ ಎಂಬೀ ರಾಮ್, ಆಟಕೆ ಸೀಡಿ ರಾಮ್

ಪವರ್ ಹೋದ್ರೆ ಹರೇ ರಾಮ್ ಹರೇ ರಾಮ್

 ಯೂಪೀಎಸ್ ಇದೆ ಅಂತ ತಲೆಯಲ್ಲಾ ಜಂಭ

 ಮಾಡೋ ಬೂಸಾ ಕೆಲಸಕ್ಕೆ ಸೇವ್ ಮಾಡೋದ್ ಬೇರೆ!

 ಡಿ.ಟಿ.ಪಿ. ದಾಕ್ಷಾಯಿಣೀಗೆ ಮೈಕ್ರೋಸಾಫ್ಟ್ ಮನ್ಮಥನೇ ಬೇಕಂತೆ

 ಸಾಫ್ಟ್‌ವೇರ್ ಗೊತ್ತೇನೇ ಸರಸು ಅಂದ್ರೆ, ''ಷಿಫಾನ್ ನೈಟೀ' ಅಷ್ಟೊ ಗೊತ್ತಿಲ್ವೇ'' ಅಂದ್ಲಂತೆ

 ಹಾರ್ಡ್‌ವೇರ್ ತಾರೋ ಸುಬ್ಬಾ ಅಂದ್ರೆ ಹಾರ್ಡ್‌ವೇರ್ ಅಂಗ್ಡೀ ಹುಡುಕಿದ್ನಂತೆ

 ಫೈಲ್‌ಗೆ ನೇಮ್ ಮಾಡೊಕ್ಕೆ ಪಂಚಾಂಗ ಹುಡುಕಿದ ಹಾಗೆ

 ಬ್ಯಾಡ್‌ಕಮಾಂಡ್ ಅಂದಿದ್ದಕ್ಕೆ ಕೀಬೋರ್ಡ್ ತೆಗೆದು ಬೀಸಿದ್ಲಂತೆ

 ಗೀಗಾಬೈಟ್ ಕೈಲಿಟ್ಕೊಂಡು ಕ್ಯಾಲುಕುಲೇಟರ್‌ಗೆ ಅತ್ತ ಹಾಗೆ

# ''ಮೇರಾ ದೇಶ್ ಮಹಾನ್''

ಕಮಲಾ ರಾಮಸ್ವಾಮಿ

ಚೈತ್ರಮಾಸಾರಂಭ. ವಸಂತದ ಆಗಮನ, ಕೋಗಿಲೆಯ ''ಕುಹೂ ಕುಹೂ''ವಿನ ಇಂಚರ, ನಳನಳಿಸುವ ಮಾವು ಬೇವಿನ ಚಿಗುರ ತಳಿರುತೋರಣ! ಮನೆಯ ಮುಂದೆ ಅಂದದ ರಂಗೋಲಿ - ಮನಸ್ಸಿಗೆ ನೆಮ್ಮದಿ, ಹರ್ಷ ತಂದಿತ್ತು. ತಕ್ಷಣ ಫೋನ್ ಕರೆಯಿತು. ''ಹಲೋ! ಯಾರು; ನಾನು ಶಾಂತಾ, ಹೊಸ ವರ್ಷದ ಹಾರ್ದಿಕ ಶುಭಾಷಯಗಳು. ಹಾಲು ಹೊಳೆ, ಜೇನುನುಡಿ, ನಗೆಯ ಬುಗ್ಗೆ ಮನೆ ತುಂಬಿ, ಮನ ತುಂಬಿ ನೆಮ್ಮದಿಯ ತರಲಿ''. ಗೆಳತಿಯ ನಲ್ಮೆಯ ಸಂದೇಶ ಕೇಳಿ ಹೃದಯ ತುಂಬಿ ಬಂತು. ''ನಿನಗೂ, ನಿನ್ನ ಮನೆಯವರಿಗೂ ಹೊಸವರ್ಷದ ಶುಭಾಷಯಗಳು. ನಿನ್ನ ಹಾಗೆ ನಾನು ಕವಿಯತ್ರಿ ಅಲ್ಲ'' ಎಂದೆ.

ಬೆಂಗಳೂರಿಗೆ ಹಿಂದಿರುಗಿ ಬಂದ ಮೇಲಿನ ಮೊದಲ ಯುಗಾದಿ. ನೆಂಟರಿಷ್ಟರ, ಆಪ್ತರ ಶುಭಾಷಯಗಳನ್ನು ಸ್ವೀಕರಿಸುತ್ತಾ, ನಮ್ಮ ಕಳೆದ ಯುಗಾದಿಗಳ ನೆನಪಿನ ಸುರುಳಿ ಬಿಚ್ಚಿತ್ತು.

ಅಸ್ಸಾಂನಲ್ಲಿದ್ದಾಗ - 'ಬೋಕಾಜಾನ್' ಎಂಬ ಒಂದು ಸಣ್ಣ ಊರು. ಮಿಕಿರ್ ಗುಡ್ಡಗಾಡಿನ ಪುಟ್ಟ ಹಳ್ಳಿ, ನಮ್ಮ ಯುಗಾದಿಗೆ ಸಮೀಪ ಅವರ ಹಬ್ಬವೂ ಬರುತ್ತೆ. ''ರಂಗೇಲಿ ಬಿಹೂ'' ಎನ್ನುತ್ತಾರೆ. ಅಸ್ಸಾಂನಲ್ಲಿ ವರ್ಷದಲ್ಲಿ ಮೂರು ಬಿಹೂ ಆಚರಿಸುತ್ತಾರೆ. ಸುಗ್ಗಿಯಲ್ಲಿ ಕಣಜ ತುಂಬಿ, ಕಾಳು ಕಡ್ಡಿ ಸಮೃದ್ಧಿಯಾದಾಗ ''ಭೋಗಾಲಿ ಬಿಹೂ'' (ಸಂಕ್ರಾಂತಿ ಹಬ್ಬ) ವಸಂತದ ಆಗಮನವನ್ನು ಸ್ವಾಗತಿಸುವ ಸಲುವಾಗಿ ''ರಂಗೇಲಿ ಬಿಹೂ'' ಮತ್ತು ಮಳೆ ನಿಂತು, ಚಳಿಗಾಲ ಆರಂಭವಾಗುವ ಮುನ್ನ ''ಕಂಗಾಲಿ ಬಿಹೂ''. ಅವರ ಎಲ್ಲಾ 'ಬಿಹೂ'ಗಳೂ 3-4 ದಿನಗಳ ಆಚರಣೆ. 'ರಂಗೇಲಿ ಬಿಹೂ' ವಿನಲ್ಲಿ ಪ್ರಕೃತಿಯ ರಮ್ಯತೆಗೆ ಸ್ಪಂದಿಸಿ ಜನರೆಲ್ಲಾ ಸಾಮೂಹಿಕ ಗಾನ, ನೃತ್ಯ, ಜಾನಪದ ಶೈಲಿಯಲ್ಲಿ ಆ ಗುಡ್ಡಗಾಡಿನ, ಗಿರಿ ಶ್ರೇಣಿಗಳ ನಡುವೆ ಬಣ್ಣದ ಚಿಟ್ಟೆಗಳಂತೆ ನಲಿದಾಡುವುದನ್ನು ನೋಡುವುದೇ ಒಂದು ಸೌಭಾಗ್ಯ. ಮನೆಗಳಲ್ಲಿ ವಿವಿಧ ರೀತಿಯ ತಿನಸನ್ನು ಮಾಡಿ ಉಣಬಡಿಸುತ್ತಾರೆ. ಎಲ್ಲಾ ಸ್ನೇಹಿತರೂ, ಬಂಧು-ಬಳಗವನ್ನೂ ಕರೆದು ಉಪಚರಿಸುತ್ತಾರೆ. ಪಕ್ಕದ ಮನೆ ಗಗೋಯಿಯ ಹೆಂಡತಿ ನಮ್ಮನ್ನು ಸಂಜೆಯ ಉಪಹಾರಕ್ಕೆ ಕರೆದಿದ್ದು ಮರೆಯಲಾಗದ ಅನುಭವ.

ಗೆಳತಿ ಶೀಲಾ ಕಲ್ಕತ್ತಾಯಿಂದ ನಮ್ಮೊಡನೆ ಎರಡು ದಿನ ಕಳೆಯಲು ಬಂದಿದ್ದಳು. ''ತಾವು ಬರಬೇಕು'' ಎಂದು ಬಹಳ ಹೇಳಿದ್ದರು. ಇಬ್ಬರೂ ನಾಲ್ಕು ಘಂಟೆಗೆ ಹೋದೆವು. ಮನೆಯೊಡತಿ ಇನ್ನೂ ಅಡಿಗೆ ಮನೆಯಲ್ಲೇ ಇದ್ದಳು. ಆಕೆ ''ಅಹೊಂ'' ಪಂಗಡದವರು. ಅವರ ಆತಿಥ್ಯ ಹೆಸರುವಾಸಿ. ನಮ್ಮನ್ನು ಕೂರಿಸಿ ಕೈ ತೊಳೆಯಲು ಬಿಸಿ

ನೀರು ಕೊಟ್ಟು ಟವೆಲ್ ಹಿಡಿದರು. ನಂತರ ಎರಡು ದೊಡ್ಡ ತಟ್ಟೆಗಳಲ್ಲಿ ತಿಂಡಿ ತಂದುಕೊಟ್ಟು, ಪಕ್ಕದಲ್ಲಿ ನಿಂತು ನವಿಲುಗರಿ ಬೀಸಣಿಗೆಯಿಂದ ಗಾಳಿ ಹಾಕತೊಡಗಿದರು. ವಿಚಿತ್ರ ಆಕಾರದ, ಏನೇನೋ ಬಣ್ಣಗಳಿದ್ದ ಆ ತಿಂಡಿಗಳನ್ನು ನೋಡಿ ಹೆದರಿದೆವು. ಒಂದಂತೂ ಕಪ್ಪೆ ಮರಿಯಂತೆ ಕೂತಿತ್ತು. ''ನಾವು ಸಸ್ಯಾಹಾರಿಗಳು'' ಎಂದೆ. ''ಗೊತ್ತು, ಇದರಲ್ಲಿ ಎಲ್ಲಾ ನೀವು ತಿನ್ನುವಂತಥದ್ದೇ!'' ಎಂದರು. ನಮಗೆ ಎಲ್ಲಾ ಹೊಸದು, ತಂಬಿಟ್ಟಿನಂತಿದ್ದ ಒಂದು ಉಂಡೆಯನ್ನು ಮುರಿದು ಬಾಯಿಗೆ ಹಾಕಿಕೊಂಡೆ; ಹಸಿ ಅಕ್ಕಿಹಿಟ್ಟು, ಬೆಲ್ಲ, ಸಗಣಿ ಸೇರಿಸಿ ಮಾಡಿದಂತಿತ್ತು. ಗುಳಕ್ ಅಂತ ನುಂಗಿಬಿಟ್ಟೆ. ಸಾವಿರ ಕಾಲಿನ ಝುರಿ ಸುತ್ತಿಟ್ಟ ಹಾಗೆ ಚಕ್ಕುಲಿಯಿತ್ತು, ಮುಟ್ಟಲು ಹೆದರಿದೆ. ಆಕೆ ''ಅದು ತಿನ್ನಿ, ಇದು ತಿನ್ನಿ'' ಎಂದು ಪದೇ ಪದೇ ಉಪಚರಿಸುತ್ತಿದ್ದರು. ಬೆಳ್ಳಗೆ ಬತ್ತಾಸಿನ ಹಾಗಿದ್ದ ಒಂದನ್ನು ತೆಗೆದು ಬಾಯಿಗೆ ಹಾಕಿದೆ. ಬೆಣಚುಕಲ್ಲಿನಂತಿತ್ತು. ಮೆಲ್ಲಗೆ, ಯಾರಿಗೂ ಕಾಣಿಸದ ಹಾಗೆ ಬಾಯಿಂದ ತೆಗೆದು ಕರ್ಚಿಫಿನಲ್ಲಿ ಸುತ್ತಿಟ್ಟುಕೊಂಡೆ. ಶೀಲಾ ಚಿಗಳಿ ಉಂಡೆಯಂತಿದ್ದ ಒಂದು ಪದಾರ್ಥವನ್ನು ಬಾಯಿಗೆ ಹಾಕಿಕೊಂಡಳು. ನಾನು ಅದನ್ನೇ ತಿಂದೆ. ಏನೋ ಹಸಿಕಲ್ಲು ವಾಸನೆ. ಆದರೆ ಕರಗಿಬಿಟ್ಟಿತು. ಆದರೆ ನೂಲುಪಾಕದಂತೆ ಒಂದೇ ಎಳೆಯಾಗಿ ಗಂಟಲಿಗೆ ಹೋಯಿತು. ನುಂಗಲೂ ಆಗದು ಉಗುಳಲೂ ಬಾರದು. ಶೀಲಾಗೂ ಹಾಗೆ ಆಗಿತ್ತು. ಇಬ್ಬರೂ ಕೈತೊಳೆಯುವ ನೆಪ ಮಾಡಿ ಹಿತ್ತಲಿಗೆ ಹೋಗಿ, ಬಾಯಿಂದ ತೆಗೆಯಲು ನೋಡಿದೆವು. ಬರವಲ್ಲದು. ಹಲ್ಲು, ನಾಲಿಗೆ ಎಲ್ಲಕ್ಕೂ ಅಂಟಿತ್ತು. ಜಬರದಸ್ತಿ ಮಾಡಿ ಎಳೆದರೆ ಕರುಳೂ ಆಚೆ ಬಂದರೆ ಎಂದು ಭಯವಾಯ್ತು. ''ಮನೆಗೆ ಹೋಗಿ ಬಿಸಿ ನೀರು ಕುಡಿದು ನೋಡೋಣ'' ಶೀಲಾ ಹೇಳಿದಂತೆ, ಅತಿಥಿ ಸತ್ಕಾರಕ್ಕೆ ವಂದಿಸಿ, ಮನೆಗೆ ಬಂದೆವು. ಆ ಅನುಭವ ಮರೆಯಲಾಗದ್ದು.

ನಮ್ಮ ಸುಖಟಂಕರ್ ಮನೆಯಲ್ಲಿ ನಡೆದ ಯುಗಾದಿ ವಿಚಾರ ನಿಮಗೆ ಹೇಳಲೇ ಬೇಕು. ನಾಗಪುರದಲ್ಲಿದ್ದಾಗ ನಡೆದಿದ್ದು. ಅವರು ಮಹಾರಾಷ್ಟ್ರದವರು. ಅವರ ಹೊಸ ವರ್ಷದ ದಿನ ''ಗುಡಿಪಡ್ವ'' ನಮ್ಮ ಯುಗಾದಿಯಂದೇ. ಶ್ರೀಮತಿ ಸುಖಟಂಕರ್ ''ಇಲ್ಲೇ ಬನ್ನಿ, ಒಟ್ಟಿಗೆ ಹಬ್ಬ ಮಾಡೋಣ'' ಎಂದರು. ನಾಗಪುರದಿಂದ 15 ಕಿ.ಮೀ. ದೂರದಲ್ಲಿತ್ತು ನಮ್ಮ ವರ್ಕ್‌ಸ್ಪಾಟ್. ಜೀಪನಲ್ಲಿ ನಾವಿಬ್ಬರೂ, ಗುಜರಾತಿ ಗೆಳೆಯರಾದ ಶಹಾ ಪಾಠಕ್ ಮತ್ತು ಸರದಾರಜಿ ದೇವಿಂದರ್ ಸಿಂಗ್, ಅಲ್ಲಿಗೆ ಹೋದೆವು. ಮಹಾರಾಷ್ಟ್ರದವರು ಅಚ್ಚುಕಟ್ಟು. ನಾಜೋಕು ಶುಚಿ, ರುಚಿಗೆ ಹೆಸರಾದವರು. ಬಲು ವೈನ. ದೊಡ್ಡ ದೊಡ್ಡ ಪರಾತದಂತಹ ತಟ್ಟೆಗಳಲ್ಲಿ ಊಟ ಬಂತು. ಸುಮಾರು 22-26 ವಿವಿಧ ಅಡಿಗೆಗಳಿದ್ದವು. ತೆಳ್ಳಗೆ ಅಗಲವಾಗಿ ಮಾಡಿದ ಒಂದು ಚಪಾತಿ, 4 ಚಮಚ ಪುಲಾವ್ ಎಲ್ಲಾ ಇಟ್ಟಿದ್ದರು. ಅಡಿಗೆ ಬಲು ರುಚಿಯಾಗಿತ್ತು. ನಮ್ಮ ದೇವಿಂದರ್ ತಟ್ಟೆ 5 ನಿಮಿಷದಲ್ಲಿ ಖಾಲಿ ಮಾಡಿಬಿಟ್ಟು ''ಸುಖಟಂಕರ್ ಸಾಬ್, ಆಪ್ ಕಾ Samples ಬಹುತ್ ಭಡಿಯಾ ಹೈ, ಅಬ್ ಅಸ್ಲೀ ಖಾನಾ ಲಾಯಿಯೆ'' ಅಂದಾಗ ಅದೆಷ್ಟು ನಕ್ಕಿದ್ದೆವು.

ಸರದಾರ್ ದೇವಿಂದರ್ ಒಮ್ಮೆ ಅವನ ಹಳ್ಳಿಗೆ ಅವರ ಬೈಸಾಕಿ-ಬಿಸಾಕಿ (ಏಪ್ರಿಲ್‌ನಲ್ಲಿ ಬರುತ್ತದೆ) ಹಬ್ಬ, ನವವರ್ಷಾರಂಭಕ್ಕೆ ಕರೆದಿದ್ದ. ಹರಿಯಾಣದ ಹತ್ತಿರವಿದ್ದ ಆ ಚಿಕ್ಕ ಹಳ್ಳಿಯಲ್ಲಿ ಆಚರಿಸಿದ್ದು. ಸಾಮೂಹಿಕ ನೂತನ ವರ್ಷಾರಂಭದ ಸ್ವಾಗತವನ್ನು, ದೊಡ್ಡ ಮೈದಾನದಲ್ಲಿ ಶಾಮಿಯಾನಾ ಹಾಕಿದ್ದರು. ಒಂದೆಡೆ ಹೆಂಗಸರೆಲ್ಲಾ ಕುಳಿತು ರೊಟ್ಟಿ ತಟ್ಟಿ ತಂದೂರಿನಲ್ಲಿ ಹಾಕುತ್ತಿದ್ದರೆ, ಗಂಡಸರ ಗುಂಪು ತರಕಾರಿ, ಪುಲಾವ್‌ನ ತಯಾರಿಕೆ ವಹಿಸಿಕೊಂಡಿದ್ದರು. ಹದಿಹರೆಯದ ಗಂಡು-ಹೆಣ್ಣುಮಕ್ಕಳು ಭಾಂಗ್ರಾ, ಪಂಜಾಬಿ ಜಾನಪದ ಗೀತೆ ಹಾಡಿ ನಲಿಯುತ್ತಿದ್ದರು. ಅಡಿಗೆ ಮಧ್ಯದಲ್ಲಿಟ್ಟು ಎಲ್ಲರೂ ಬಡಿಸಿಕೊಂಡರು. ಅದೆಷ್ಟು ವಿಶ್ವಾಸ, ಆದರಣೆ, ಆತಿಥ್ಯ! ಆ ತಂದೂರಿನ ಘಮ ಇನ್ನೂ ಮರೆತಿಲ್ಲ!

ದಕ್ಷಿಣಕ್ಕೆ ಬಂದಾಗ ಆಂಧ್ರಪ್ರದೇಶದ ರಂಗಾರೆಡ್ಡಿ ಡಿಸ್ಟ್ರಿಕ್‌ನಲ್ಲಿದ್ದ ಕರಗ್‌ಕೋಟ್ ಎಂಬ ಹಳ್ಳಿಯಲ್ಲಿದ್ದಾಗ ನಡೆದ ಯುಗಾದಿ ಸಂಭ್ರಮವೇ ಬೇರೇ ರೀತಿ. ಆಂಧ್ರದವರಲ್ಲೂ ನಮ್ಮ ಹಾಗೆ ಚೈತ್ರ ಶುದ್ಧ ಪಾಡ್ಯಮಿಯಂದೇ ಹಬ್ಬ ಆಚರಿಸುತ್ತಾರೆ. ಹಳ್ಳಿಯಲ್ಲಿನ ಸನ್ಮಾನ್ಯ ಶಂಕರ್‌ಬಾಬು, ಅಲ್ಲಿನ ಜಮೀನ್‌ದಾರ್ ಆಗಿದ್ದವರ ಮನೆಗೆ ಸಂಜೆ ಹಬ್ಬದ ಪ್ರಯುಕ್ತ ಆಹ್ವಾನ ಬಂದಿತ್ತು. ಶಂಕರ್‌ಬಾಬು ಅವರ ತಾಯಿ ಹೋಳಿಗೆ ಮಾಡಿದ್ದನ್ನು ಕಣ್ಣಾರೆ ಕಂಡಿದ್ದೆ. ದೊಡ್ಡದಾಗಿ ತೆಳ್ಳಗೆ, ಚಿನ್ನದ ತಗಡಿನಂತಿದ್ದ ಅದು ಯಾರ ಬಾಯಲ್ಲಾದರೂ ನೀರು ಬರುವಂತಿತ್ತು. ಅವರ ಆವಕ್ಕಾಯಿ ಉಪ್ಪಿನಕಾಯಿ, ಬದನೆ ಪದಾರ್ಥ, ಟೊಮ್ಯಾಟೋ ಗೊಜ್ಜು, ತರಕಾರಿ ಕಲಸಿದನ್ನ.... ಬಲು ಚೆನ್ನ ಎಂದು ಎಲ್ಲರೂ ಹೇಳುತ್ತಿದ್ದರು. ಮನೆಯಲ್ಲಿ ಸಿಂಪಲ್ಲಾಗಿ ಹಬ್ಬ ಮಾಡಿ ಸಂಜೆ ಸರ್‍ಯಾಗಿ ಊಟ ಹೊಡೆಯಬೇಕೆಂದು ಯೋಜಿಸಿ ಹೊರಟೆವು. ಸಂಜೆ 5ಕ್ಕೆ ಕರೆದಿದ್ದರು. ಎಲ್ಲರೂ ವೇಳೆಗೆ ಸರ್‍ಯಾಗಿ ಬಂದರು. ಮನೆಯ ಮುಂದಿನ ಜಗುಲಿಗೆ ದೊಡ್ಡ ಜಮಖಾನೆ ಹಾಕಿ ಹೆಂಗಸರನ್ನು ಕೂರಿಸಿದರು. ಕೆಳಗೆ ಅಂಗಳದಲ್ಲಿ ಗಂಡಸರಿಗೆ ಕುರ್ಚಿ ಹಾಕಿದ್ದರು. ಎಲ್ಲರೂ ಕುಳಿತಾದ ಮೇಲೆ ಶಂಕರ್‌ಬಾಬು ಗರಿಮುರಿಯಾದ ಬಿಳಿ ಕಚ್ಚೆಪಂಚೆಯುಟ್ಟು ಬಂದು ಶುಭಾಶಯ ಕೋರಿದರು. ಅವರ ತಾಯಿ ಬಂದು ಎಲ್ಲರಿಗೂ ಅರಿಸಿನ-ಕುಂಕುಮ ಕೊಟ್ಟರು. ಹಿಂದಿನಿಂದ ಅವರ ಸೊಸೆಯರು ಬೆಳ್ಳಿ ಲೋಟಗಳನ್ನು ಹಿಡಿದು ಬಂದರು. ಎಲ್ಲರಿಗೂ ಕುಡಿಯಲು ಕೊಟ್ಟರು. ಮೊದಲು ಸರ್ವ್ ಮಾಡುವ 'ಅಪಿಟೈಸರ್' ಎಂದುಕೊಂಡೆ. ಲೋಟದಲ್ಲಿದ್ದ ದ್ರವ ಹಸಿರು ಬಣ್ಣದ್ದಾಗಿತ್ತು. ಸ್ವಲ್ಪ ಗಟ್ಟಿಯಾಗಿತ್ತು. ಮೇಲೆ ಗಸೆಗಸೆ ಉದುರಿಸಿದ್ದಂತಿತ್ತು. ಇದನ್ನು ಕುಡಿದ ಮೇಲೆ ಬಹುಷಃ ತಿಂಡಿಗಳು ಎಂದುಕೊಂಡು ಗಟಗಟ ಅಂತ ಒಂದು ಗುಟುಕು ಹಾಕಿದೆನೋ ಇಲ್ಲವೋ, ಮೈಯೆಲ್ಲಾ ಜುಂ ಎಂದು ಹೊಟ್ಟೆ ತೊಳೆಸಿದಂತಾಯಿತು. ಕಹಿ ಕಾರ್ಕೋಟ! ''ಇದೇನು'' ಎಂದು ಕೇಳಿದೆ. ''ಪಚ್ಚಾ(ಪಚಡಾ)'' ಅಂದ್ರು. ಅದು ಬೇವಿನ ರಸಕ್ಕೆ ಇನ್ನೊಂದು ಹತ್ತು ತರಹ ಕಹಿ ಸೊಪ್ಪು ಅರೆದು ಹಾಕಿ ಬೆಲ್ಲ ಸ್ವಲ್ಪ ಸೇರಿಸಿ ಕೊಡುವುದು ಪದ್ಧತಿಯಂತೆ. ಇವರು ಸಿರಿವಂತರಾದ್ದರಿಂದ ಕೊಬ್ಬರಿ ತುರಿ ಗಸೆಗಸೆ ಮೇಲೆ ಉದುರಿಸಿದ್ದರು ಎಂದರು. ಸಾಧ್ಯವಿಲ್ಲ ಎಂದು ಕುಡಿಯಲಾರದೆ ಲೋಟ ಇಟ್ಟುಬಿಟ್ಟೆ

ಅಷ್ಟೇ! ಆಮೇಲೆ ಎಲ್ಲರನ್ನೂ ವಿಶ್ವಾಸದಿಂದ ಬಿಳ್ಕೊಟ್ಟರು. ಇಂಗು ತಿಂದ ಮಂಗನ ಮುಖ ಮಾಡಿಕೊಂಡು ವಾಪಾಸ್ಸಾದೆವು. 'ಪಚ್ಡಾ' ಅನುಭವ ಬಹಳ ಹಸಿರಾಗಿಯೇ ಇದೆ.

ನಮ್ಮ ದೇಶ 20 ವರ್ಷಗಳ ಹಿಂದೆ ಹಾಗಿತ್ತು. ಈಗ - ಅಸ್ಸಾಂನಲ್ಲಿ ಕಾಲಿಡುವಂತಿಲ್ಲ - ಜೀವಭಯ. ಪಂಜಾಬಿನಲ್ಲಿ ಯಾವಾಗಲೂ ಭೀತಿ ಕಾದಿರುತ್ತೆ. ರಂಗಾರೆಡ್ಡಿ ಡಿಸ್ಟ್ರಿಕ್ ನಕ್ಸಲೀಯರ ತೌರೂರಾಗಿದೆ. ಆ ನಮ್ಮ 'ಭಾರತ್ ದೇಶ್ ಹಮಾರಾ' ಮಹಾನ್ ಆಗುತ್ತದೆಯೆ? ನಮ್ಮ ಮುದ್ದು ಮೊಮ್ಮಕ್ಕಳ ಕಾಲಕ್ಕಾದರೂ ಆ ಭಾವೈಕ್ಯತೆ, ಪ್ರೇಮ, ಸ್ನೇಹ ಬರಲಿ, ತಾಯ್ನಾಡಿನ ಮಡಿಲು ನೆಮ್ಮದಿ, ಶಾಂತಿಯು ತುಂಬಿರಲಿ ಎಂದು ಭಗವಂತನನ್ನು ಬೇಡಿದೆ.

★★★



"ಜಗತ್ತಿನಲ್ಲೇ ನೀನೇ ಅತಿ ರೂಪವಂತೆ. ಬೇಕಾದ್ರೆ ನೀರಿನಲ್ಲಿ ನೋಡ್ಕೊ"

# Enrich yourself through savings in

# KAMADHENU



True to its name, KAMADHENU gives plenty to you. Interest on interest once in every three months. In addition to all advantages of Term Deposits.

With a minimum deposit of Rs.100/- (no ceiling on upper limits), you can multiply your deposits for as long as you want - from 5 months to 120 months. Facility for loan up to 75% of the deposit plus interest accrued.

Contact our branch nearest to you. And find out how to enrich yourself through savings in KAMADHENU. High yielding and the most preferred among deposit schemes.



CANARA BANK

(A Govt. of India Undertaking)

H.O., J.C. Road, Bangalore 560 002

# ಹರಾಜುಗಾರ

**ಎಂ.ಎಸ್.ಕೆ.**

ಅರವತ್ತರ ಕೊನೆಯಲ್ಲಿ ನಾನು ಇಂಗ್ಲೇಂಡಿನ ಒಂದು ಚಿಕ್ಕ ಊರಿನಲ್ಲಿದ್ದೆ. ಅಲ್ಲಿ ಶನಿವಾರ ಮತ್ತು ಭಾನುವಾರ ರಜ. ನಾನು ಒಬ್ಬೊಂಟಿಗ. ಸ್ನೇಹಿತರ್ಯಾರೂ ಇರಲಿಲ್ಲ. ಇಲ್ಲಿನಹಾಗೆ ಬೇಜಾರಾದಾಗ ಅವರಮನೆ, ಇವರಮನೆ ಅಂತ ಧಿಡೀರಾಗಿ ಹೋಗುವಂತಿಲ್ಲ. ಕಾಲಕಳೆಯುವುದು ಬಹಳ ಕಷ್ಟ. ಅಲ್ಲಿನವರಂತೆ ಸಮುದ್ರ ತೀರಕ್ಕೋ ಅಥವಾ ಇನ್ನೆಲ್ಲಿಗೋ "ವೀಕ್ ಎಂಡ್" ಅಂಥ ಹೋಗಲು ಹಣವಿಲ್ಲ ಹಾಗೂ ಧೈರ್ಯವಿಲ್ಲ. ಆದ್ದರಿಂದ ಅಲ್ಲಿ ಶನಿವಾರ ನಡೆಯುವ ಸಂತೆಗಳಲ್ಲಿ ಬೆಳಗ್ಗಿನ ಬಹಳ ಕಾಲ ಕಳೆಯುತ್ತಿದ್ದೆ. ಆಗಾಗ್ಗೆ ಚಿಕ್ಕ ಪುಟ್ಟ ಸಾಮಾನುಗಳನ್ನು ಕೊಂಡಿದ್ದೇನೆ. ಅವು ಈಗಲೂ ನನ್ನ ಬಳಿ ಇವೆ.



ಈ ಶನಿವಾರದ ಸಂತೆಗಳಲ್ಲಿ ಮುಖ್ಯ ಆಕರ್ಷಣೆ ಹರಾಜಗಾರರು. ಅವರ ಪ್ರತಿಭೆ ಎಷ್ಟೆಂದರೆ ನೀವು ತೊಟ್ಟ ಕೋಟನ್ನ ನಿಮಗೇ ಮಾರಿ ನಿಮ್ಮಿಂದಲೇ ದುಡ್ಡು ಕೀಳುತ್ತಾರೆ. ಅವರ ಕಣ್ಣುಗಳಲ್ಲಿ ಹಿಪ್ನಾಟಿಸಮ್ ಇರುತ್ತದೆ. ಅವರ ವೇಷ ಭೂಷಣಗಳು ಮಿಕ್ಕೆಲ್ಲವರಿಗಿಂತ ಬೇರೆಯಾಗಿರುತ್ತದೆ. ಉದ್ದನೆಯ ಹ್ಯಾಟು, ನುಣ್ಣಗೆ ಬೋಳಿಸಿದ ಗಡ್ಡ, ಉದ್ದನೆಯ ಮೀಸೆ (ಕೃತಕವೂ ಇರಬಹುದು), ಸೈಡ್ ಬರ್ನ್ಸ್, ಟೈಗೆ ಬದಲು ಸ್ಕಾರ್ಫ್. ಇವುಗಳೆಲ್ಲ ಅವರಿಗೆ ವಿಶೇಷ ವ್ಯಕ್ತಿತ್ವವನ್ನು ಕೊಟ್ಟಿರುತ್ತದೆ. ಅವರು ತುಂಬಾ ಉದ್ದ ಇಲ್ಲಾ ತುಂಬಾ ಕುಳ್ಳ. ಮಧ್ಯಮದವರು ಬಹಳ ಕಡಿಮೆ.

ಅವರೆಲ್ಲರ ಕೈಲಿ ಒಂದು ಬಡಿಗೆ. ಪಕ್ಕದಲ್ಲಿ ಒಂದು ಖಾಲೀ ಡ್ರಂ.

ಅವರ ಇಂಗ್ಲೀಷ್ ಪಾಂಡಿತ್ಯ ಅಸಾಧಾರಣ. ಮೆಲ್ಲಗೆ ಚೊಕ್ಕವಾಗಿ ಮಾತನಾಡುತ್ತಾರೆ. ಎಲ್ಲರಿಗೂ ಚೆನ್ನಾಗಿ ಅರ್ಥವಾಗುವಂತೆ. ಆಗಾಗ್ಗೆ ಕಣ್ಣು ಮಿಟುಕಿಸುತ್ತಿರುತ್ತಾರೆ. ಬೇಕೆಂತಲೇ ಮುಂದಿನ ಎರಡು ಹಲ್ಲುಗಳನ್ನು ಚಿನ್ನದಲ್ಲಿ ಕಟ್ಟಿಸಿರುತ್ತಾರೆ. ಮನೋಶಾಸ್ತ್ರ ಪ್ರವೀಣರು. ಮುಖ ನೋಡಿ ಬಕರಾಗಳ್ಯಾರು ಎಂದು ಸುಲಭವಾಗಿ ಕಂಡುಹಿಡಿದುಬಿಡುತ್ತಾರೆ.

ಒಬ್ಬಾತ ಪಿಂಗಾಣೀ ಸಾಮಾನನ್ನು ತನ್ನ ಸುತ್ತ ರಾಸಿ ಹಾಕಿಕೊಂಡಿದ್ದ. ಅವನ ಸುತ್ತ ಕೆಲವು ಹೆಂಗಸರೂ ಮತ್ತು ಗಂಡಸರೂ ನಿಂತಿದ್ದರು. ಅವನ ವಾಕ್ ಪ್ರವಾಹ ಹೀಗಿತ್ತು. ''ನಾನೇನು ಸುಂದರಾಂಗನಲ್ಲ. ನಾನೇನು ಮನ್ಮಥನಲ್ಲ. ಮೋಸಗಾರನಲ್ಲವೇ ಅಲ್ಲ. ನನ್ನ ವಂಶ ದೊಡ್ಡದು. ನಾನೇನು ಅಂಥ ಮಹಾ ಬುದ್ಧಿವಂತನೂ ಅಲ್ಲ. ಆದರೂ ದೇವರು ನನಗೆ ಮಾತನಾಡಲು ಕಲಿಸಿ ಕೊಟ್ಟಿದ್ದಾನೆ. ನಾನು ಮಾತನಾಡಿ ಕತ್ತೆಯ ಹಿಂದಿನ ಕಾಲುಗಳನ್ನು ಎಬ್ಬಿಸಬಲ್ಲೆ. ಕೇಳೀ, ಕೇಳೀ, ಇಲ್ಲಿ ನೋಡಿ'' ಎಂದು ವರಟಾದ ಪಿಂಗಾಣಿ ಕಪ್ ಒಂದನ್ನು ತನ್ನ ಬಲಗೈ ತೋರುಬೆರಳು ಮತ್ತು ಹೆಬ್ಬೆರಳುಗಳಲ್ಲಿ ಹುಷಾರಾಗಿ ಹಿಡಿದು ನಿಧಾನವಾಗಿ ತನ್ನ ಕಣ್ಣಿನ ಸಮಕ್ಕೆ ಎತ್ತಿಹಿಡಿದು ತದೇಕಚಿತ್ತದಿಂದ ನೋಡತೊಡಗಿದ. ಆಮೇಲೆ ಅದೇ ಹುಷಾರಿನಲ್ಲಿ ಅದನ್ನು ತನ್ನ ಎಡಗೈ ಹಸ್ತದ ಮೇಲಿಟ್ಟುಕೊಂಡು ಅದೊಂದು ಅಪೂರ್ವ ವಸ್ತುವಿನಂತೆ ನೋಡುತ್ತಾ ''ಇಲ್ಲಿ ನೋಡೀ, ಈ ಪಿಂಗಾಣಿ ಸೆಟ್ ದೊಡ್ಡ ಅಂಗಡಿಯಲ್ಲಿ ನೂರು ರೂ.ಗೆ ಕಮ್ಮಿಯಿಲ್ಲ. ಅಲ್ಲಿ ನಿಮ್ಮನ್ನು ಕೇಳುವವರೇ ಇಲ್ಲ. ನಾನೇನು ತಮಾಷೆ ಮಾಡುತ್ತಿಲ್ಲ. ಹುಡುಗಾಟಮಾಡುತ್ತಿಲ್ಲ. ನನಗೆ ಆ ನೂರು ರೂಪಾಯಿ ಬೇಡ'' ಎಂದು ಕೈಲಿದ್ದ ಬಡಿಗೆಯಿಂದ ಡ್ರಂ ಮೇಲೆ ಢ್ಂ ಎಂದು ಬಡಿದ. ''ನನಗೆ ಎಪ್ಪತ್ತಐದು ಬೇಡ''ಢಂ., ''ಐವತ್ತೂ ಬೇಡ'' ಢಂ., ''ನನಗೆ ಬೇಕಾದ್ದೂ, ನನಗೆ ಬೇಕಾದ್ದೂ'' ಢಂ-ಢಂ, ''ನನಗೆ ಬೇಕಾದ್ದೂ ಕೇವಲ ನಲವತ್ತು'' ಢಂ-ಢಂ-ಢಂ. ''ಯಾರಿಗುಂಟೂ ಯಾರಿಗಿಲ್ಲ, ಬೇಗ ಬೇಗ ಕೈ ಎತ್ತಿ'' ಎಂದ. ಯಾರೂ ಕೈ ಎತ್ತಲಿಲ್ಲ. ಅವನು ಒಂದು ಸಲ ಎಲ್ಲರನ್ನೂ ನೆಟ್ಟ ನೋಟದಿಂದ ನೋಡಿದ. ತಲೆ ಅಳ್ಳಾಡಿಸುತ್ತಾ ''ಆಗಲಿ, ಆಗಲಿ, ನೀವೆಲ್ಲಾ ನನಗಿಂತ ಬಹಳ ಬುದ್ಧಿವಂತರು. ಹೋಗಲೀ ಬಿಡಿ. ನೀವೇ ಗೆಲ್ಲಿ. ನಾನೇ ಸೋತೆ. ಒಪ್ಪಿದೆ, ಒಪ್ಪಿದೆ, ಮೂವತ್ತೈದಕ್ಕೆ ಕೊಡುತ್ತೇನೆ'' ಎಂದು ಹೇಳಿ ಢಂ, ಢಂ-ಢಂ ಎಂದು ಬಡಿಯಲು ಶುರುಮಾಡಿದ. ಕೆಲವರು ಪರ್ಸ್ ಬಿಚ್ಚಿ ದುಡ್ಡು ತೆಗೆಯಲು ಶುರುಮಾಡಿದರು. ಅವನು ಪ್ಯಾಕ್ ಮಾಡಲು ಶುರು ಮಡಿದ. ನಾನು ಅಲ್ಲಿಂದ ನಿಧಾನವಾಗಿ ಮುಂದೆ ಸಾಗಿದೆ.

ಮತ್ತೊಂದು ವಿಶಾಲವಾದ ಅಂಗಡಿ. ಅಲ್ಲಿನ ಹರಾಜುಗಾರ ಕುಳ್ಳ, ಬಣ್ಣ ಬಣ್ಣದ ಟೈ ಕಟ್ಟಿದ್ದ. ಚಿನ್ನದ ಗಡಿಯಾರದ ಸರಪಣಿ ಕೋಟಿನ ಮೇಲೆ ಬಿಟ್ಟಿದ್ದ. ಮೊದಲು ಸಿಗರೇಟ್ ಲೈಟರ್ ಒಂದನ್ನು ಕೈಗೆತ್ತಿಕೊಂಡು ''ಇದು ನೋಡಿ... ಇಂಥಾ

ದೊಡ್ಡ ಕಂಪೆನಿಯಲ್ಲಿ ತಯಾರಿಸಿದ್ದು'' ಎಂದು ಹೇಳುವಷ್ಟರಲ್ಲಿ ಅಲ್ಲಿದ್ದ ಒಬ್ಬ ಗಿರಾಕಿ ''ಅದು ಆ ಕಂಪೆನಿಯಲ್ಲಿ ಮಾಡಿದ್ದಲ್ಲಾ'' ಎಂದ.

ಹರಾಜಿಗ - ''ನಿನಗೆ ಹೇಗೆ ಗೊತ್ತು''

ಗಿರಾಕಿ - ''ನಾನು ಆ ಕಂಪೆನಿಯಲ್ಲೇ ಕೆಲಸ ಮಾಡೋದು''

ಹರಾಜಿಗ - ''ಆ ಕಂಪೆನಿಯ ಎಂ.ಡಿ. ಮಿ.... ಅವರನ್ನು ಬಲ್ಲೆಯಾ? ಅವರು ನನ್ನ ಫ್ರೆಂಡ್. ಅವರಲ್ಲಿಗೆ ಹೋಗೋಣ ಬರುತ್ತೀಯಾ?''

ಆ ಗಿರಾಕಿ ಅಲ್ಲಿಂದ ನಿಷ್ಕ್ರಮಿಸಿದ. ಅಂಗಡಿಯವ ನಮ್ಮನ್ನು ನೋಡುತ್ತ ''ನೋಡಿದಿರಾ, ಆ ಎಂ.ಡಿ. ಹೆಸರು ಕೇಳೀ ಹೇಗೆ ಅವನು ಓಡಿಹೋದ''.

ಇದೊಂದು ನಾಟಕ ಎಂದು ಬೇರೇ ಹೇಳಬೇಕಾಗಿಲ್ಲವಲ್ಲ.

ಆ ಲೈಟರ್ ಕೆಳಗಿಟ್ಟು ಒಂದು ಗಡಿಯಾರ ಕೈಗೆತ್ತಿಕೊಂಡ. ''ನನಗೆ ಇದಕ್ಕೆ ಐವತ್ತೂ ಬೇಡ. ನಲವತ್ತೂ ಬೇಡ. ಮೂವತ್ತೂ ಬೇಡವೇ ಬೇಡ. ಈಗ ಚಪ್ಪಾಳೆ ತಟ್ಟುತ್ತೇನೆ. ಮೊದಲು ಕೈ ಎತ್ತಿದ ಇಬ್ಬರಿಗೆ ಮಾತ್ರ ಮೂವತ್ತಕ್ಕೂ ಕಮ್ಮಿಗೆ ಕೊಡುತ್ತೇನೆ. ಆ ಮೇಲೆ ನಿರಾಶರಾಗಬೇಡಿ'' ಎಂದು ಟಪ್ ಅಂತ ಚಪ್ಪಾಳೆ ತಟ್ಟಿದ. ಯಾರೂ ಕೈ ಎತ್ತಲಿಲ್ಲ. ಅವನು ದೀರ್ಘ ನಿಟ್ಟುಸಿರುಬಿಡುತ್ತಾ ತನ್ನ ಪಕ್ಕದಲ್ಲಿ ಕುಳಿತಿದ್ದ ಹೆಂಗಸಿಗೆ ''ರೂತ್ ಇವತ್ತೇನಾಗಿದೆ, ಇದು ಇಂಗ್ಲೇಂಡ್ ದೇಶವಲ್ಲವೇ. ನಾನು ಮಾತನಾಡುತ್ತಿರುವುದು ಇಂಗ್ಲೀಷ್ ಭಾಷೆ ಅಲ್ಲವೇ. ಇವರಿಗೆಲ್ಲಾ ಇಂಗ್ಲೀಷ್ ಬರೋದಿಲ್ಲವೇ. ಮತ್ಯಾಕೆ ಇಂಥಾ ಅವಕಾಶ ಕಳೆದುಕೊಳ್ಳುತ್ತಿದ್ದಾರೆ''. ಆಕೆ ಇವನ ಮಾತಿಗೆ ಗಮನ ಕೊಡದೆ ತನ್ನ ಪಾಡಿಗೆ ತನ್ನ ಉಗುರುಗಳನ್ನು ಪಾಲಿಶ್ ಮಾಡುತ್ತಿದ್ದಳು. ಅವನು ಪುನಃ ನಮ್ಮ ಕಡೆಗೆ ತಿರುಗಿ ''ಹೋಗಲಿ, ನನಗೆ ಮೂವತ್ತು ರೂಪಾಯಿಯೂ ಬೇಡ. ಮತ್ತೆ ಚಪ್ಪಾಳೆ ತಟ್ಟುತ್ತೇನೆ. ಈಗ ಕೈ ಎತ್ತಿದ ಒಬ್ಬರಿಗೆ ಮಾತ್ರ ಇಪ್ಪತ್ತೊಂಬತ್ತಕ್ಕೂ ಕಡಿಮೆಗೆ ಕೊಡುತ್ತೇನೆ'' ಎನ್ನುತ್ತಾ ಮತ್ತೆ ಚಪ್ಪಾಳೆ ತಟ್ಟಿದ. ನನ್ನೊಬ್ಬನನ್ನು ಬಿಟ್ಟು ಮತ್ಯಾರು ಕೈ ಎತ್ತಲಿಲ್ಲ. ಅವನು ''ಶಹಬ್ಬಾಶ್, ನೀನೊಬ್ಬನೇ ಬುದ್ಧಿವಂತ. ಇದನ್ನು ತೊಗೋ. ನನಗೆ ಇಪ್ಪತ್ತೆಂಟೂವರೆ ಕೊಡು'' ಎನ್ನುತ್ತಾ ನನಗೆ ಆ ಗಡಿಯಾರವನ್ನು ನೀಡಿದ. ಎಲ್ಲರೂ ನನ್ನನ್ನೇ ನೋಡುತ್ತಾ ನಗುತ್ತಿದ್ದರು. ಇಂಗು ತಿಂದ ಮಂಗನಂತೆ ದುಡ್ಡು ತೆತ್ತು ಗಡಿಯಾರ ಕೊಂಡು ಅಲ್ಲಿಂದ ಹೊರಟೆ.

ಆ ಗಡಿಯಾರ ಇನ್ನೂ ನನ್ನ ಕಪಾಟಿನಲ್ಲೇ ಬಿದ್ದಿದೆ. ಅದರ ಗಾಜಿನಲ್ಲಿ ಆ ಹರಾಜಿಗನ ಮುಖ ಸ್ಪಷ್ಟವಾಗಿ ಕಾಣುತ್ತಿದೆ.

ಈಗ ಆ ಹರಾಜುದಾರರಿದ್ದಾರೋ ಇಲ್ಲವೋ ಗೊತ್ತಿಲ್ಲ. ಹೊಸ ವ್ಯಾಪಾರ ತಂತ್ರಗಳು ಅವರನ್ನು ಕೊಚ್ಚಿಕೊಂಡು ಹೋಗಿರಬಹುದು. ಹಾಗಾಗಿದ್ದರೆ ಆ ನಷ್ಟ ನಮಗೇ ವಿನಃ ಆ ಹರಾಜಿಗರಿಗಲ್ಲ.



# ಮುಂದಾನೊಂದು ಕಾಲದಲ್ಲಿ

**ಹೆಚ್.ಆರ್. ಪ್ರಭಾಕರ**

ಮೊನ್ನೆ ನನಗೊಂದು ಕಾಗದ ಬಂದಿತು. ಇದೆಲ್ಲಿಂದ ಬಂದಿದೆ ಎಂದು ನನಗೆ ತಿಳಿಯಲೇ ಇಲ್ಲ. ಯಾಕೆಂದರೆ ಅದರ ಮೇಲಿದ್ದ ಪೋಸ್ಟ್ ಸೀಲ್ ಯಾವುದೋ ನನಗೆ ತಿಳಿಯದ ಭಾಷೆ ಒಡೆದುನೋಡಿದೆ. ಹೀಗೆ ಪ್ರಾರಂಭವಾಗಿತ್ತು.

1. 11.2015

ತ್ರಿಶಂಕುಲೋಕ

ಪ್ರಿಯ ಮಿತ್ರನಿಗೆ ಆದರದ ನಮಸ್ಕಾರಗಳು

ಅಕ್ಷರ ಮೋಡಿ ಇದ್ದುದರಿಂದ ತಿಳಿಯಲೂ ಕಷ್ಟವಾಯಿತು. ಕೊನೆಗೆ ಕಷ್ಟಪಟ್ಟು ವಿವಿಧ ಕೋನಗಳಿಂದ ಓದಿ ಅದನ್ನು ತಲೆಕೆಳಗಾಗಿ ಇಟ್ಟು ಓದಿದಾಗ ಅರ್ಥವಾಯಿತು. ನಿಮಗೆ ಆ ಕಷ್ಟವಾಗದಂತೆ ಸರಿಯಾಗಿಯೇ ಬರೆದಿದ್ದೇನೆ.

ಹಾಂ! ಹೇಳಲು ಮರೆತೆ ಇದು ನನ್ನ ಪ್ರಿಯಮಿತ್ರ ದಿನಕರನ ಪತ್ರ. ಸರಿಯಾಗಿ ಹೇಳಬೇಕೆಂದರೆ ''ಪ್ರಿಯಮಿತ್ರನಾಗಿದ್ದ'' ಎಂದು ವಿಶೇಷಣವನ್ನು ಉಪಯೋಗಿಸಬೇಕು. ಇರಲಿ. ಆ ಕತೆ ಆಮೇಲೆ. ಆತ ತೀರಿಕೊಂಡು ಇನ್ನೂ ವರ್ಷವೂ ಆಗಿಲ್ಲ. ಆದರೆ ಪತ್ರದ ದಿನಾಂಕ ನೋಡಿ- 1. 11.2015! ಅಬ್ಬಾ! ಇದು ಹೇಗೆ ಸಾಧ್ಯ? ಆತ ಐನ್‌ಸ್ಟೈನನ ಸಿದ್ಧಾಂತವನ್ನು ಸಿದ್ಧ ಮಾಡಿತೋರಿಸಿ, ಬೆಳಕಿನ ವೇಗದಲ್ಲಿ ಹಾರಿಹೋದನೇ? ಮತ್ತು ಕಾಗದ ಹೇಗೆ ಬರೆದ? ಹೀಗೆ ಪ್ರಶ್ನೆಗಳ ಸಮಸ್ಯೆಗಳು ಉದ್ಭವಿಸಿದವು.

ಇರಲಿ ಕಾಗದವನ್ನೇ ನಿಮ್ಮ ಮುಂದಿಡುತ್ತಿದ್ದೇನೆ. ದಯವಿಟ್ಟು ಓದಿ ನನ್ನ ಸಮಸ್ಯೆಯನ್ನು ಬಿಡಿಸಿ.

''.....ಮೊನ್ನೆ ಬೆಂಗಳೂರಿಗೆ ಒಂದು ಹಾರುವ ಭೇಟಿ (Flying visit)ಗಾಗಿ ಕಷ್ಟಪಟ್ಟು ''ಸಾವೀ'' ದೊರಕಿಸಿಕೊಂಡೆ. ಸೂರ್ಯಾಸ್ತದೊಳಗೇ ವಾಪಸಾಗಬೇಕೆಂದು ಕಂಡಿಷನ್ ಬೇರೆ ಇರಲಿ.

ಈ ಭೇಟಿಯಲ್ಲಿ ನನಗೆ ಕಂಡುಬಂದದ್ದು ಅನೇಕ ಸೋಜಿಗಗಳು ಮೊದಲನೆಯದು ಕನ್ನಡ ಇನ್ನೂ ''ಮೃತ ಭಾಷೆ''ಯಾಗದೇ ಉಳಿದಿರುವುದು. ನಾವು ಕಾಲೇಜಿನಲ್ಲಿ ಓದುತ್ತಿದ್ದಾಗ ಸಂಸ್ಕೃತ ಮೃತ ಭಾಷೆಯೇ? ಎಂದು ಚರ್ಚಾಸ್ಪರ್ಧೆಗೆ

ವಿಷಯಕೊಟ್ಟಿದ್ದರು. ಆಗ ನಮ್ಮ ಕ್ಲಾಸ್‌ಮೇಟ್- ಅವನ ಹೆಸರು ಹಳಂದೀಕರ್, ಪುರಂದೀಕರ್ ಎಂತದೋಕರ್, ಅವನು 'ಸಂಸ್ಕೃತ' ಎಂಬ ಪದವನ್ನು ಹೊಡೆದು ಹಾಕಿ ಕನ್ನಡ ಎಂದು ಬರೆದದ್ದು ನೆನಪಿದೆಯೇ? ಆದರೂ ಸಹ ಇಲ್ಲಿಯವರೆಗೆ ಕನ್ನಡ ಬದುಕಿ ಉಳಿದಿದೆಯಲ್ಲವೇ? ಎಂತಹ ಅದ್ಭುತ. ನಾನು ಹನುಮಂತಯ್ಯರೋಡಿನಲ್ಲಿ ಬ್ರೆಡ್‌ತಿನ್ನುತ್ತಾ ಈ ವಿಷಯಕ್ಕೆ ಅಚ್ಚರಿ ಪಡುತ್ತಿದ್ದಾಗ (ಈಗ ಈ ರಸ್ತೆಗೆ ಡಬ್ಬುಲುರೋಡ್ ಎಂದು ತೆಲುಗು ಹೆಸರಿಟ್ಟಿದ್ದಾರೆ) ನಾಯಿಯೊಂದು ಸರಪಳಿ ಸಮೇತ ಧಾವಿಸಿ ಬಂದು ನನ್ನ ಬ್ರೆಡ್‌ನತ್ತ ಮೂಸಿನೋಡತೊಡಗಿತು. ಆಗ ಆ ನಾಯಿಯ ಒಡೆಯ ಓಡಿಬಂದು ''ಕಳ್ಳಮುಂಡೇದೆ, ಕಂಡ ಕಂಡವರ ಹತ್ತಿರ ಹೋಗಿ ಬ್ರೆಡ್ ಕೇಳ್ತೀಯಾ'' ಎಂದು ಅಚ್ಚಗನ್ನಡದಲ್ಲಿ ಆದನ್ನು ಬೈದದ್ದು ಕೇಳಿ, ಅಬ್ಬಾ! ಪರವಾಗಿಲ್ಲವೇ? ನಾಯಿಗಳೂ ಕನ್ನಡ ಕಲಿತುಬಿಟ್ಟಿವೆ ಎಂದುಕೊಂಡೆ.

ನಾನು ನಿಂತಿದ್ದ ಅಂಗಡಿಯಲ್ಲಿ Magazineಗಳನ್ನು ಮಾರುತ್ತಿದ್ದರು. ಇದೇ ಎರಡನೇ ಸೋಜಿಗದ ಸಂಗತಿಯ ಮೂಲ. ಪುಟಾಣಿ ಅಪರಂಜಿ ಯಾವ್ವನವನ್ನು ದಾಟಿ ಒಂಟಿಬಾಳನ್ನು ಯಶಸ್ವಿಯಾಗಿ ನಡೆಸಿ ರಾರಾಜಿಸುತ್ತಿದ್ದಳು. ಅದೇ ಮುಗುಳ್ನಗೆ ಅದೇ ಬುಟ್ಟಿ. ಆದರೆ ವಯೋಧರ್ಮಕ್ಕನುಗುಣವಾಗಿ ಸ್ವಲ್ಪ ದಪ್ಪಕ್ಕಾಗಿದ್ದಳು. 50-60 ಪುಟಗಳಿದ್ದಿರಬೇಕು ಆಹಾ! ಒಳಗೆಲ್ಲಾ ಬಣ್ಣದ ಚಿತ್ರಗಳು!

ಹಾಗೆಯೇ ದಿನ ಪತ್ರಿಕೆಯ ಮೇಲೂ ಕಣ್ಣಾಡಿಸಿದೆ ಅದ್ಭುತ! ಹಿಂದಿನ ದಿನ ಬೆಂಗಳೂರಲ್ಲಿ ಧಾರಾಕಾರವಾಗಿ ಮಳೆ ಸುರಿದಿತ್ತಂತೆ. ಹಿಂದೆ ಸಣ್ಣ ಮಳೆಗೂ ಸಹ ಈ ''ಡಬ್ಬಲ್‌ರೋಡ್'' ತುಂಬಿ ಹೋಗುತ್ತಿತ್ತಲ್ಲವೇ? ಹಾಗಾದರೆ ''ಧಾರಾಕಾರ'' ಪದದ ಅರ್ಥ ಬೇರೆ ಇರಬಹುದು. ಈಗ ಮಳೆ ಕಡಿಮೆ ಆಗಿ 2 ಮೀಮೀ ಮಳೆಗೆ 'ಧಾರಾಕಾರ' ಎನ್ನಬಹುದು ಎಂದುಕೊಂಡೆ. ಇಲ್ಲ ಹಾಗೇನೂ ಆಗಿರಲಿಲ್ಲ ಏಳು ಸೆಂ.ಮೀ ಮಳೆ ಎಂದಿತ್ತು. ಅಂಗಡಿಯವನನ್ನು ಕೇಳಿದೆ- ''ಹೌದು ಸ್ವಾಮಿ, ನೀವೆಲ್ಲಿ ಹೋಗಿದ್ದಿರಿ? ಎಂಥಾ ಮಳೆ ಹೊಯ್ದಿತು'' ಅಂದು ಮತ್ತೆ ರಸ್ತೆಯಲ್ಲಿ ಒಂದು ಹನಿ ನೀರು ಇಲ್ಲವಲ್ಲ ಎಂದು ಕೇಳಿದೆ ''ಆವಾಗ ಜರ್ನಲಿಸ್ಟ್ ಕಾಲೋನಿ ಮುಳುಗೋದರಲ್ಲಿತ್ತಲ್ಲ ಸ್ವಾಮಿ. ಆ ವರ್ಷ ದೊಡ್ಡ ಮೋರೀನ ಇನ್ನೂ ದೊಡ್ಡದು ಮಾಡಿಸಿಬಿಟ್ಟರು. ಈಗ ಮಳೆ ಬಂದರೆ ಜೊಯ್ ಅಂತ ನೀರೆಲ್ಲಾ ಹರ್‍ಕೊಂಡು ಹೊರಟುಹೋಗುತ್ತೆ'' ಅಂದ. ಎಂಥಾ ಸೋಜಿಗವಲ್ಲವೇ? ನಮ್ಮ ಹಿರಿಯರು ಚಂದ್ರಲೋಕಕ್ಕೆ ಅಪೋಲೋ ಹೋಗಿದ್ದನ್ನು ಕೇಳಿದಾಗ ಆದ ಅನುಭವವೇ ಈಗ ನನಗಾಯಿತು.

ಪೇಪರ್‌ನಲ್ಲಿ ಒಂದು ಸ್ವಾರಸ್ಯವಾದ ಸುದ್ದಿ ಇತ್ತು. ಮಳೆ ವಿಪರೀತವಾಗಿ ಕರ್ನಾಟಕದ ಆಣೆಕಟ್ಟುಗಳೆಲ್ಲಾ ತುಂಬಿ ಹೋಗಿದ್ದವಂತೆ. ಕಾವೇರಿಯಲ್ಲಿ ಮಹಾಪ್ರವಾಹ ಬರಲಿದೆ ಎಂದು ಮುನ್ಸೂಚನೆ ಕೊಟ್ಟಿದ್ದರು. ಈ ಪ್ರವಾಹದಿಂದ ತಂಜಾವೂರಿನ ಬಯಲಿನ ಬೆಳೆ ಕೊಚ್ಚಿಹೋಗಬಹುದು. ಇದರಿಂದ ಬೆಳೆ

ನಾಶವಾಗುವುದರ ಜೊತೆಗೆ ಕ್ರಿ.ಪೂ. 2000 ದಿಂದ ತಮ್ಮ ಸಂಸ್ಕೃತಿಯನ್ನು ಮೆರೆಸಿಕೊಂಡು ಬಂದಿರುವ ತಮಿಳು ಜನತೆಗೆ ಅಪಾರಹಾನಿ ಆಗಬಹುದೆಂದು ಆ ಜನ ಹಾಹಾಕಾರವೆಬ್ಬಿಸಿದ್ದರು. ಸದ್ಯದಲ್ಲೇ ಚುನಾವಣೆಗಳು. ಪ್ರಜೆಗಳನ್ನು ಮಕ್ಕಳಂತೆಯೇ ನೋಡಿಕೊಳ್ಳುತ್ತಿದ್ದ ತಮಿಳುನಾಡಿನ ಮುಖ್ಯಮಂತ್ರಿಗಳು ಈ ಕೆಳಕಂಡ ಹೇಳಿಕೆಗಳನ್ನು ಕೊಟ್ಟಿದ್ದರು.

1. ಟ್ರಿಬ್ಯೂನಲ್‌ನವರು ಹೇಳಿರುವುದಕ್ಕಿಂತ ಒಂದು ಹನಿ ಹೆಚ್ಚಿನ ನೀರನ್ನು ಕರ್ನಾಟಕ ನದಿಗೆ ಬಿಡುವಂತಿಲ್ಲ

2. ಕರ್ನಾಟಕದಲ್ಲಿ ಮಳೆ ಹೆಚ್ಚಾಗಿ ಬಂದಿದೆ ಎಂಬ ಮಾತೆಲ್ಲ ಸುಳ್ಳು. ನಮಗೆ ತೊಂದರೆ ಕೊಡುವುದಕ್ಕಾಗಿ ಅವರು ಅಣೆಕಟ್ಟುಗಳ ಎಲ್ಲ ಗೇಟುಗಳನ್ನು ತೆರೆದು ಪ್ರವಾಹ ಉಂಟುಮಾಡುತ್ತಿದ್ದಾರೆ.

3. ಈ ವರ್ಷ ತಮಿಳುನಾಡಿನಲ್ಲಿ ಅಕಾಲವೃಷ್ಟಿಯಾಗಿ ಎಲ್ಲ ಜಲಾಶಯಗಳ ಭರ್ತಿಯಾಗಿರುವುದರಿಂದ ಕರ್ನಾಟಕದವರು ಟ್ರಿಬ್ಯೂನಲ್ ನಿಗದಿ ಪಡಿಸಿರುವುದರಲ್ಲಿ 50% ಮಾತ್ರ ಬಿಡಬೇಕು.

ಇಷ್ಟು ಸಾಲದೆಂಬಂತೆ ಸರ್ವದಳೀಯ ತಂಡವನ್ನು ಕಟ್ಟಿಕೊಂಡು ಹೋಗಿ ಪ್ರಧಾನ ಮಂತ್ರಿಯವರಿಗೆ ಚಾಡಿ ಹೇಳಿದ್ದರು. ಇದು ಕರ್ನಾಟಕದವರ ಪಿತೂರಿ ಆದ್ದರಿಂದ ಅಲ್ಲಿ ಸರ್ಕಾರವನ್ನು ಉಚ್ಚಾಟನೆಗೊಳಿಸಿ ರಾಷ್ಟ್ರಪತಿ ಆಡಳಿತವನ್ನು ತಂದಲ್ಲಿ ಮಾತ್ರ ತಮಿಳರಿಗೆ ಗೌರವ ಸಲ್ಲಿಸಿದಂತೆ ಎಂದು ಹೇಳಿಕೆ ಕೊಟ್ಟಿದ್ದರು.

ಈ ಮಧ್ಯೆ ಟ್ರಿಬ್ಯೂನಲ್ ಒಂದು ಆದೇಶ ಹೊರಡಿಸಿತು. 85% ನೀರನ್ನು ಬಿಡುವಂತೆ ತಾವು 1995ರಲ್ಲಿ ಹೊರಡಿಸಿದ್ದ ಆಜ್ಞೆಯನ್ನು ಈಗ ತಿದ್ದುಪಡಿ ಮಾಡಿರುವುದೆಂದೂ 75% ಪ್ರಮಾಣಕ್ಕಿಂತ ಒಂದು ಹನಿ ನೀರನ್ನೂ ಹೆಚ್ಚಿಗೆ ಬಿಡಬಾರದೆಂದು ಕರ್ನಾಟಕ ಸರ್ಕಾರಕ್ಕೆ ಹುಕುಂ ಮಾಡಿತು.

ಕರ್ನಾಟಕ ಸರ್ಕಾರಕ್ಕೆ ಈ ಹುಕುಂ ಜಾರಿ ಮಾಡಲು ಸಾಧ್ಯವೇ ಆಗಲಿಲ್ಲ. ಅಷ್ಟರೊಳಗಾಗಿ ಆಣೆಕಟ್ಟುಗಳೆಲ್ಲಾ ತುಂಬಿ ಚೆಲ್ಲಿ ಹೋಗುತ್ತಿದ್ದವು. ತಮಿಳುನಾಡಿನವರು ಸುಪ್ರೀಂಕೋರ್ಟ್‌ನ ಮೊರೆ ಹೊಕ್ಕರು. ಮಾನನೀಯ ನ್ಯಾಯಾಧೀಶರು ಎರಡೂ ಕಡೆಯ ಅಹವಾಲನ್ನು ಕೇಳಿ, ದೀರ್ಘವಾಗಿ ಆಲೋಚಿಸಿ, ಈ ವಿವಾದವನ್ನು 48 ಗಂಟೆಗಳ ಒಳಗಾಗಿ ಪರಿಹರಿಸಬೇಕೆಂದು ಪ್ರಧಾನಿಗಳಿಗೆ ಹೇಳಿ ತಮ್ಮ ಕೈತೊಳೆದುಕೊಂಡರು. ಪ್ರಧಾನಮಂತ್ರಿಗಳು ಇಕ್ಕಟ್ಟಿಗೆ ಸಿಕ್ಕಿಕೊಂಡರು. ಸದ್ಯಕ್ಕೆ ಕರ್ನಾಟಕವು 1995ರಲ್ಲಿ ನಿಗದಿಪಡಿಸಿದ 85% ನೀರನ್ನು ಬಿಡಬೇಕೆಂದೂ, ಉಳಿದ ನೀರಿನ ಬಗ್ಗೆ ವಿಚಾರಮಾಡಲು, ಗುಜರಾತ್, ರಾಜಸ್ಥಾನ ಮತ್ತು ಹರಿಯಾಣ ಪ್ರದೇಶಗಳ ನೀರಾವರಿ ತಜ್ಞರ ಒಂದು ಸಮಿತಿಯನ್ನು ರಚಿಸಿದರು. ಇದರಿಂದ ಕೆಲಸವಿಲ್ಲದೇ ಕುಳಿತ್ತಿದ್ದ ನರ್ಮದಾ ಯೋಜನೆಯ ತಜ್ಞರಿಗೆ ತಮ್ಮ ಅನುಭವವನ್ನು

ಹಂಚಿಕೊಳ್ಳಲು ಒಂದು ಅವಕಾಶಸಿಕ್ಕಿದಂತಾಯಿತು.

ಈ ಸಮಿತಿಯ ಸದಸ್ಯರು ವಿಶೇಷ ವಿಮಾನದಲ್ಲಿ ಬಂದಿಳಿದಾಗ ಕರ್ನಾಟಕದ ಸರ್ಕಾರದಿಂದ ರಾಜೋಚಿತ ಸ್ವಾಗತ ಸಿಕ್ಕಿತು. ಪಂಚತಾರಾ ಹೋಟೆಲಿನ ವಾಸ್ತವ್ಯ. ಹೆಲಿಕಾಪ್ಟರ್‌ನಲ್ಲಿ ಓಡಾಟ, ಅಲ್ಲದೆ ಆನೆಗಳ ಮೇಲೆ ಕುಳಿತು ಆಯಕಟ್ಟಿನ ಪ್ರದೇಶಗಳ ಸಮೀಕ್ಷೆ ''ಕೆಳಗಿಳಿದು ಹರಿಯುವುದೇ ಜಲದ ಗುಣವಯ್ಯ. ಜನದವೋಲು ಎಮ್ಮ ಮನ, ಕೆಳಮೊಗವು ಚಂಚಲವು...''ಎಂಬ ಕವಿವಾಣಿಯನ್ನು ಮುಖ್ಯಮಂತ್ರಿಗಳು ಘೋಷಿಸಿದರು. ಆದರೆ ಆ ಸದಸ್ಯರಿಗೆ ಕನ್ನಡ ಬರುತ್ತಿರಲಿಲ್ಲ ಅಲ್ಲದೆ ನದಿಗೆ ಇಳಿದ ನೀರನ್ನು ಹಿಂದಿರುಗಿ ಹತ್ತಿಸಲು ಸಾಧ್ಯ ಎಂದು ನರ್ಮದಾ ಯೋಜನೆಯಲ್ಲಿ ತೋರಿಸಲು ಹೊರಿಟಿದ್ದವರು, ಅವರಲ್ಲಿ ಕೆಲವರು. ಹೀಗಾಗಿ ಆಣೆಕಟ್ಟಿನ ಬಾಗಿಲು ತೆರೆಯದಿದ್ದರೆ ಏನಾಗುತ್ತದೆ ಎಂದು ಅವರಿಗೆ ತಿಳಿಸಲು ಪ್ರಾಯೋಗಿಕವಾಗಿ ಸಿದ್ಧ ಪಡಿಸಿ ತೋರಿಸಬೇಕಾಯಿತು. ಇದರಿಂದ ಜಲಾಶಯಗಳ ನೀರು ಹಿಂದಕ್ಕೆ ಹರಡಿ ಪಂಪುಸೆಟ್‌ಗಳೊಳಗೆಲ್ಲಾ ನೀರುತುಂಬಿ ಕೆಟ್ಟು ಕೂತವು. ಬಿಲ್ಲು ತುಂಬುವವರಿಲ್ಲದೆ. ಕೆ.ಇ.ಬಿ. ಯ ಬೊಕ್ಕಸ ಬರಿದಾಯಿತು. ಕೆ.ಇ.ಬಿ.ಗೆ ನಾವು ''ಕರೆಂಟು ಎಗರಿಸುವ ಬೋರ್ಡ್'' ಎಂದು ಕರೆಯುತ್ತಿದ್ದೆವು. ಈಗ ಏನಾಗಿದೆಯೋ?

ತಜ್ಞರ ಸಮಿತಿ ತಮಿಳುನಾಡಿಗೆ ಹೋಯಿತು. ಅಲ್ಲಿನ ಮುಖ್ಯಮಂತ್ರಿಗಳು ವಿಮಾನ ನಿಲ್ದಾಣದಲ್ಲೇ ಭರತನಾಟ್ಯ ಕಾರ್ಯಕ್ರಮ ಏರ್ಪಡಿಸಿ ಸ್ವಾಗತಿಸಿದರು. ವಿಶ್ವದಲ್ಲೇ ಅತಿ ಪ್ರಾಚೀನ ಕಾವ್ಯವಾದ ''ಶಿಲಪ್ಪದಿಕಾರಂ'' ನ ಪ್ರತಿಗಳನ್ನು (ಚಿನ್ನದ ಕಟ್ಟು ಹಾಕಿಸಿ) ಸದಸ್ಯರಿಗೆ ಕೊಟ್ಟರು. ತಂಜಾವೂರಿನ ವೀಣೆಗಳ ಪ್ರದರ್ಶನಕ್ಕೆ ಕರೆದೊಯ್ದರು. ಆಮೇಲೆ ಹೆಲಿಕಾಪ್ಟರು ಯಾನ.

ದೆಹಲಿಗೆ ಹಿಂತಿರುಗಿದ ತಜ್ಞರ ಸಮಿತಿ ಒಂದೇ ದಿನದಲ್ಲಿ 1500 ಪುಟಗಳ ವರದಿಯನ್ನು ಪ್ರಧಾನಮಂತ್ರಿಗಳಿಗೆ ಒಪ್ಪಿಸಿತು. ಅದನ್ನು ಅಭ್ಯಸಿಸಲು ಮಾನ್ಯ ಮಂತ್ರಿಗಳು ಒಂದು ಉಪಸಮಿತಿಯನ್ನುರಚಿಸಿದರು. ಅದೇ ದಿನ ''ಹಲ್ವಾ'' ಎಂಬ ಖಾಯಿಲೆಗೆ ತುತ್ತಾಗಿ ಉಪಸಮಿತಿಯ ಮೂರ್‍ನಾಲ್ಕು ಸದಸ್ಯರು ಗೈರುಹಾಜರಾದರು.

ಅಯ್ಯಾ ಗೆಳೆಯಾ, ಇಷ್ಟುಹೊತ್ತಿಗೆ ನಾನು ಬೆಂಗಳೂರನ್ನು ಬಿಡುವ ಹೊತ್ತಾದದ್ದರಿಂದ ನನ್ನ ''ಸಾವೀ''Expireಆಗುವಷ್ಟರಲ್ಲಿ ಹೊರಟುನಿಂತೆ ಮುಂದೇನಾಯಿತು ದಯವಿಟ್ಟು ತಿಳಿಸು.

ನಿನ್ನ ಚಡ್ಡಿದೋಸ್ತ್
ದಿನಕರ

# ಶರಲೇಖ ಪ್ರಕರಣ

**ಕಣ್ಣನ್ ದಯಾಲ್**

ಜನವರಿ ತಿಂಗಳ ಒಂದು ಪ್ರಾತಃಕಾಲ. ನಾನು ಬೇಗ (ಎಂಟು) ಎದ್ದು, ಪ್ರಾತರ್ವಿಧಿಗಳನ್ನು ಮುಗಿಸಿ, ಕಾಫಿ ಹೀರುತ್ತ ನಮ್ಮ ಬಂಗಲೆಯ ಕಿಟಿಕಿ ಬಳಿ ನಿಂತು ಹೊರಗೆ ಇದ್ದ ರಸ್ತೆಯತ್ತ ನೋಡುತ್ತಿದ್ದೆ. ಶರಲೇಖ ಪೇಪರ್ ಎಸೆದು, ನನ್ನ ಬಳಿ ಬಂದ. 'ವತ್ಸನ, ನೋಡು, ಅಲ್ಲಿ ಬರುತ್ತಿರುವ ವ್ಯಕ್ತಿ, ನನ್ನ ಕನ್ಸಲ್ಟ್ ಮಾಡಲು ಬರುತ್ತಿರುವಂತಿದೆ!' ಅಂದ. ಆ ವ್ಯಕ್ತಿ ಆಜಾನುಬಾಹು, ಗೌರವರ್ಣ- ಈ ವರ್ಣ ಪತ್ತೇದಾರಿ ಕತೆಗಳಲ್ಲಿ ಹೇಗೆ ಬಂತು ಎಂದು ತಿಳಿಯಲು ಉತ್ಸುಕರಾಗಿರುವ ಓದುಗರು ನನ್ನನ್ನು ಸಂಪರ್ಕಿಸಬಹುದು- ಮುಖದ ಮೇಲೆ ಆತಂಕದ ಗೆರೆಗಳು. ಈ ವ್ಯಕ್ತಿ ಎರಡೇ ನಿಮಿಷದಲ್ಲಿ ನಮ್ಮ ಜತೆ ನಿಂತ. ನಮ್ಮ ಪರಿಚಾರಕ ಹುಸೇನ ಕಾಫಿ ತಂದುಕೊಟ್ಟ. ಈಗಂತುಕ ವ್ಯಕ್ತಿ ಉವಾಚ; ''ಶರಲೇಖ ಅವರೆ, ನಾನು ಸರ್ಕಾರದ ಗುಪ್ತದಳದ ಅಧಿಕಾರಿ! ಒಂದು ಗಹನವಾದ ಡೈರಿ ಕಳೆದುಹೋಗಿದೆ- ಅದೂ ನಂ ಆಫೀಸಿನಿಂದ! ಅದೇನಾದರೂ ರಾಂಗ್ ಕೈಗಳಿಗೆ ಸೇರಿದರೆ, ನಂ ದೇಶದ ಭವಿಷ್ಯಕ್ಕೇ ಅಪಾಯ! ನೀವು ನಿಂ ಬುದ್ಧೀನೆಲ್ಲ ಉಪಯೋಗಿಸಿ ಆ ಡೈರೀನ ರಿಟ್ರೀವ್ ಬೇಕು!''

ಶರಲೇಖ ನಕ್ಕ.''ಆ ಡೈರಿ ಹಾಗಾದರೆ ಇನ್ನೂ ರಾಂಗ್ ಕೈ ಸೇರಿಲ್ಲವೆ?'' ಅಧಿಕಾರಿ ಪೆಚ್ಚಾದ! ಶರಲೇಖ, ಕೇಸಿನ ವಿವರಗಳನ್ನ ವಿಚಾರಿಸಿದ ಈ ಡೈರಿ ದೇಶದಲ್ಲೆಲ್ಲ ಬಿರುಗಾಳಿ ಎಬ್ಬಿಸಿರುವ ಹವಾಲಾಗೆ ಸಂಬಂಧಿಸಿದ್ದು; ಇದೇನಾದರೂ ಬಹಿರಂಗವಾದರೆ, ಸರ್ಕಾರದ ಪತನ ಖಚಿತ ಎಂದು ಗೊತ್ತಾಯಿತು. ನಾನು ಆ ಚಳಿಯಲ್ಲೂ ನಡುಗಿದೆ! ಶರಲೇಖ, ''ಸರಿ, ನಾನು ವತ್ಸನನ ಸಹಾಯದೊಡನೆ ಈ ಕೇಸ್ ಸಾಲ್ವುತ್ತೇನೆ!'' ಎಂದು ಗರ್ಜಿಸಿದ.

ಶರಲೇಖ ನಿಂತ, ''ವತ್ಸನ, ಈ ಭಾರೀ ಕ್ರೈಂ ಹಿಂದೆ ಭಾರೀ ಕೈವಾಡ ಇರಲೇ ಬೇಕು! ಬಾ, ಮರಿಯಾಟ್ಟಿ ಮನೆಗೆ ಹೋಗೋಣ'' ಎಂದ. ಈ ಮರಿಯಾಟ್ಟಿ ಬಗ್ಗೆ ಅರಿಯಲು, ಲೇಖಕನೇ ಬರೆದಿರುವ ಭಾರತದ ಕ್ರೈಂ ರಿಂಗ್ ಎಂಬ ಗ್ರಂಥವನ್ನು ಕೊಂಡು ಓದಲೆತ್ನಿಸಬಹುದು. ನಗರದ ಶ್ರೀಮಂತ ಬಡಾವಣೆಯ ಸೌಧ; ಭಾರೀ ಸೆಕ್ಯೂರಿಟಿ, ನಾಯಿ, ಅನ್ಯಾಯಿ ನೌಕರರು ಇತ್ಯಾದಿ. ಶರಲೇಖ, ನಾನು ಒಳಕ್ಕೆ ಹೋದೆವು. ಮರಿಯಾಟ್ಟಿ ಚೆಶೈರ್ ಬೆಕ್ಕಿನ ತರಹ ನಗೆ ಬೀರುತ್ತ ಬಂದ. 'ಬನ್ನಿ, ಬನ್ನಿ, ಬಡವನ ಆತಿಥ್ಯ ಸ್ವೀಕರಿಸಿ!' ಎಂದ. ಶರಲೇಖ ಗಂಭೀರವಾಗಿ, 'ಮರಿ, (ಆಪ್ತ ಸಂಬೋಧನೆ- ಏನಿದ್ದರೂ ಅವರು ಒಂದು ರೀತಿ ಗೆಳೆಯರು- ಮರಿಯಾಟ್ಟಿ ಇಲ್ಲದಿದ್ದರೆ, ಶರಲೇಖನಿಗೆ ಕೆಲಸವೆಲ್ಲಿ?-) ಆ ಡೈರಿ ಎಲ್ಲಿದೆ ಹೇಳು! ಮರ್ಯಾದೆಯಿಂದ ಕೊಟ್ಟು ಭಾರತವನ್ನು ಅಪಾಯದಿಂದ ಪಾರುಮಾಡು!' ಎಂದ, ಮರಿಯಾಟ್ಟಿ ನಸುನಕ್ಕ. 'ಶರಲೇಖ, ಆ ಡೈರಿಯಲ್ಲೇ ನನ್ನ ಭವಿಷ್ಯ ಅಡಗಿದೆ! ಅದು ಈಗ ನನ್ ಹತ್ರ ಇಲ್ಲ ಎಂದು ಸಿಂಬಾಲಿಕ್

ಆಗಿ ಕೈತೊಳೆದುಕೊಂಡಂತೆ ನಟಿಸಿದ. ಬಹಳ ಹೊತ್ತು ವಾದ ವಿವಾದಗಳು ನಡೆದರೂ ಮರಿಯಾಟ್ಟ ಜಗ್ಗಲಿಲ್ಲ. ನಾವು ಬಂದ ದಾರಿಗೆ ಸುಂಕವಿಲ್ಲ ಎಂದು ಹೊರಟೆವು. ಮನೆಯ ಹೊರಗೆ, ಒಂದು ಬುರ್ಖಾಧಾರಿ ಹೆಂಗಸು ನಡೆದುಬಂದು, ಶರಲೇಖನ ಕೈಯಲ್ಲಿ ಒಂದು ಪೇಪರ್ ಚೂರನ್ನಿಟ್ಟು ಬೇಗ ನಡೆದು ಹೋದಳು; ನಾನು (ಎಂದಿನಂತೆ) ಚಕಿತನಾದೆ. ಶರಲೇಖ ನಾವು ಮನೆಸೇರಿದ ನಂತರ ಆ ಪೇಪರ್ ನೋಡಿದ. ಆತನ ಮುಖ ಕೋಪದಿಂದ ಕೆಂಪೇರಿತು; ನನ್ನ ಕಡೆ ಆ ಪೇಪರ್ ಎಸೆದ! ಅದರ ಮೇಲೆ ಮೂರುನಾಮದ ಗೆರೆಗಳಿದ್ದವು! 'ವತ್ಸನ, ಆ ಬುರ್ಖಾಮಹಿಳೆ ಇದನ್ನ ಕ್ಲೂ ತರಹ ಕೊಟ್ಟಿರಬಹುದು;' ಎಂದೆ. ಶರಲೇಖ ಅಂತರ್ಮುಖವಾಗಿ ಕುಳಿತ, ಎರಡು ಗಂಟೆಯಾಯಿತು; ಎದ್ದ 'ಬಾ ವತ್ಸನ! ಅಭೀ ಖೇಲ್ ಶುರೂ ಹೋ ರಹಾ ಹೈ; (ದ ಗೇಮ್ ಈಸ್ ಅಪುಟ್ ಎಂಬಂತೆ)' ಎಂದು ಧಾವಿಸಿ ನಡೆದ.

ಪಂಚತಾರಾ ಹೋಟೆಲು. ನಾನು ಶರಲೇಖ ಸೆಕ್ಯೂರಿಟಿಯನ್ನು ಭೇದಿಸಿ, ಅಡುಗೆಮನೆ ಪರಿಚಾರಕರ ವೇಷದಲ್ಲಿ ಹೊಕ್ಕೆವು. ಅಂದೇ ರಾತ್ರಿ ಶರಲೇಖ ನನ್ನನ್ನು ಎಬ್ಬಿಸಿದ. ಎಲ್ಲೆಲ್ಲೂ ಹಾಲು ಚೆಲ್ಲಿದ ಬೆಳದಿಂಗಳು, ಹುಣ್ಣಿಮೆಯ ಚಂದ್ರ ನಮ್ಮನ್ನು ನೋಡಿ ನಗುತ್ತಿದ್ದ. ನಾವು ಸ್ಪೆಷಲ್ ರೂಮು ಒಂದರ ಬಳಿ ಹೋಗಿ ಮೆಲ್ಲನೆ ಕಿಟಿಕಿಯಿಂದ ಒಳ ಹೊಕ್ಕೆವು. ಮಂಚದ ಮೇಲೆ ಯುವಕನೊಬ್ಬ ಗಾಢನಿದ್ರೆಯಲ್ಲಿದ್ದ.



ಶರಲೇಖ ಮೂಲೆಯಲ್ಲಿದ್ದ ವಸ್ತುವೊಂದನ್ನು ತೆಗೆದುಕೊಂಡ. ಸದ್ದಿಲ್ಲದೆ ಹೊರಗೆ ಬಂದೆವು. ಬೆಳದಿಂಗಳಲ್ಲಿ ಶರಲೇಖ ಸರಸರನೆ ಕಾರ್ಯನಿರತನಾದ. ಪೊದೆಯೊಂದರ ಹಿಂದೆ ಕುಳಿತು ಆ ವಸ್ತುವನ್ನು ನನಗೆ ತೋರಿಸಿದ. ಕ್ರಿಕೆಟ್ ಬ್ಯಾಟ್! ಅದರ ವಿಲೋ ಬೆಳದಿಂಗಳಲ್ಲಿ ಹೊಳೆಯುತ್ತಿತ್ತು. ಶರಲೇಖ ಬ್ಯಾಟಿನ ಹಿಂಭಾಗದಿಂದ ಒಂದು ಚೂರು ಮರದ ಚೆಕ್ಕೆ ತೆಗೆದ. ಆಶ್ಚರ್ಯ ಬ್ಯಾಟಿನ ಒಳಗೆ ಒಂದು ಸೀಕ್ರೆಟ್ ರಂಧ್ರ! ಅದರಿಂದ ಕಪ್ಪು ಡೈರಿಯೊಂದು ಹೊರಬಿತ್ತು! ನಾನು ನಡುಗುವ ಕೈಗಳಿಂದ ಅದನ್ನು ಜೇಬಿಗಿಟ್ಟೆ.

★ ★

ಮಧ್ಯಾನ್ಹ ಒಂದು ಗಂಟೆ ಹುಸೇನ ಮೇಜಿನ ಮೇಲೆ ಊಟಕ್ಕೆ ಅಣಿ ಮಾಡುತ್ತಿದ್ದ. ಕಾಲಿಂಗ್ ಬೆಲ್ಲಾಯಿತು. ಗುಪ್ತದಳದ ಅಧಿಕಾರಿ! ಸುಮಾರು ನಾಲ್ಕು ಕೆ.ಜಿ. ಕಡಿಮೆ ತೂಕ; ಒಳಗೆ ಬಂದು ಶರಲೇಖನ ಕಡೆ ನೋಡಿದ ಶರಲೇಖ:- ''ಈ ಕೇಸು ಬಹಳ ಕಷ್ಟ! ನಾನು ಇರೋ ಐ.ಕ್ಯೂ, ಎಲ್ಲ ಬಳಸಿದರೂ ಉತ್ತರ ಗೊತ್ತಾಗಲಿಲ್ಲ!'' ಅಧಿಕಾರಿಯ ಮುಖ ಬಳಿಚಿಕೊಂಡಿತು. ಶರಲೇಖ ಹೇಳಿದ 'ವತ್ಸನ ಡೈರಿಯಂತೂ ಸಿಗಲಿಲ್ಲ ಇವರಿಗೆ ಕ್ರಿಕೆಟ್ ಬ್ಯಾಟ್ ಒಂದನ್ನಾದರೂ ಬಹುಮಾನ ಕೊಡು!'' ನಾನು (ಆದಷ್ಟು) ಗಂಭೀರನಾಗಿ ಎದ್ದು ಅಧಿಕಾರಿಗೆ ಮೂಲೆಯಲ್ಲಿಟ್ಟಿದ್ದ ಬ್ಯಾಟನ್ನು ಕೊಡಲು ಹೋದೆ. ಅಧಿಕಾರಿಗೆ ಕೋಪ ಉಕ್ಕಿ ನೆತ್ತಿಗೇರಿತು. ಗಡುಸಾದ ಧ್ವನಿಯಲ್ಲಿ ,''ಶರಲೇಖ, ಈ ಪರಿಹಾಸ್ಯ ಸಾಲ್ದುಂ! (ಕೋಪದಲ್ಲಿ ಅವನ ಬ್ರೇನ್ ಹಳೆಗನ್ನಡಕ್ಕೆ ತಿರುಗಿತ್ತು) ನನಗೆ ಪ್ರಾಣಸಂಕಟ, ನಿಮಗೆ ಚೆಲ್ಲಾಟವೆ? ''ಎಂದು ಗುಡುಗಿದ. ನಾನು ನಡುಗಿದೆ. ಶರಲೇಖ ಶಾಂತಸ್ವರದಲ್ಲಿ ''ಹೆದರ ಬೇಡಿ! ಆ ಬ್ಯಾಟಿನಲ್ಲಿ ಏನಿದೆ ನೋಡಿ!'' ಎನ್ನುತ್ತ ಆ ಬ್ಯಾಟನ್ನು ಜೋರಾಗಿ ನೆಲಕ್ಕೆ ಹೊಡೆದ. ಹುಸೇನ ಓಡಿಬಂದ. ಅತ್ಯಾಶ್ಚರ್ಯ, ಬ್ಯಾಟ ಒಡೆದು, ಅದರ ಒಳಗಿಂದ ಕಪ್ಪು ಡೈರಿ ಹಾಗೂ ಧೂಳು ಹೊರಬಂದವು. ಅಧಿಕಾರಿ ಕೇಕೆ ಹಾಕುತ್ತಾ ಕುಣಿದಾಡಿದ! ಈ ನಯನ ಮನೋಹರ ದೃಶ್ಯವನ್ನು ಸೆರೆಹಿಡಿಯಲು ಕ್ಯಾಮೆರಾ ಇಲ್ಲವಲ್ಲ ಎಂದು ನಾನು ದುಃಖ ತಪ್ತನಾಗಿ ಕುಳಿತೆ.

''ವತ್ಸನ, ಆ ಬುರ್ಖಾ ಮಹಿಳೆ, ಮಹಿಳೆಯಲ್ಲ, ನಮ್ಮ ಪಾಲಿನ ದೇವತೆ! ಅವಳು ಮರಿಯಾಟ್ಟಿಯನ್ನು ಕಂಡರೆ ನಖಶಿಖಾಂತ ಉರಿದು ಬೀಳುತ್ತಾಳೆ. ಅವಳು ಕೊಟ್ಟ ಕ್ಲೂ? ಮೂರು ವಿಕೆಟ್‌ಗಳ ಚಿತ್ರ! ಅದರ ಸಹಾಯದಿಂದ ನಾನು ಯೋಚನೆಮಾಡಿದೆ. ಅತಳ ವಿತಳ ರಸಾತಳಗಳಲ್ಲೆಲ್ಲ ಅತ್ಯಂತ ಸೇಫ್ ಜಾಗ ಅಂದರೆ ತೆಂಡೂಲ್ಕರನ ಬ್ಯಾಟ್! ಅದನ್ನ ನಾವು ಅವತ್ತು ಹೋಗಿ ಡೈರಿ ಸಂರಕ್ಷಿಸದೆ ಇದ್ರೆ, ವರ್ಲ್ಡ್ ಕಪ್ ಫೈನಲ್‌ಗೆ ಆ ಬ್ಯಾಟ್ ಪಾಕಿಸ್ಥಾನಕ್ಕೆ ಹೋಗ್ತಾ ಇತ್ತು! ಆ ಡಯಬಾಲಿಕಲ್ ಮರಿಯಾಟ್ಟಿ ಇದನ್ನೆಲ್ಲ ಯೋಜನೆ ಮಾಡಿದ್ದ; ಆದರೆ ನನ್ನ ಸರಿಸಾಟಿಗೆ ಬರಲಿಲ್ಲ!!''

ಆದರೆ ಒಂದು ಸಂಶಯ ನನ್ನ ಕಾಡ್ತಾ ಇದೆ. ಭಾರತದ ಸರ್ಕಾರ ಪತನವಾಗದೇ ಇರೋ ತರಹ ಮಾಡಿದ್ದು, ದೇಶಸೇವೆಯೋ, ಅಥವಾ ದೇಶದ್ರೋಹವೋ ಅಂತ!.

★

# ಭೀಮಸೃಷ್ಟಿ

ಬಿ. ಎನ್. ನರಹರಿ

"ಡಾಕ್ಟರ್ ಅಶ್ವಿನ್ ವೈದ್ಯರು 4ನೇ ಮಹಡಿ ಎಮರ್ಜನ್ಸಿ ವಾರ್ಡಿಗೆ ತಕ್ಷಣ ಬರಬೇಕು. ರಕ್ತಪರೀಕ್ಷೆ ಮಾಡಿ, ಆಪರೇಷನ್‌ಗೆ ಸಿದ್ಧಮಾಡಿ. ಪೇಷಂಟ್‌ಗೆ ಅಪೆಂಡಿಸೈಟಿಸ್ ಇದ್ದರೂ ಇರಬಹುದು ಅಂತಾರೆ ಡ್ಯೂಟಿ ಡಾಕ್ಟರ್" ಪೇಜರ್ ಮೂಲಕ ಟೆಲಿಫೋನ್ ಸಂದೇಶ ಬೆಳ್ಳಂ ಬೆಳಗ್ಗೆ.

ಸರ್ಕಾರಿ ಕುಸಜ್ಜಿತ ಸೂಪರ್ ಸ್ಪೆಷಲ್ ಆಸ್ಪತ್ರೆ 8ನೇ ಅಂತಸ್ತಿನಲ್ಲಿ ಬಿಸ್ಲೇರಿ ಬಾಟಲ್ ನೀರಲ್ಲಿ ಮುಖ ತೊಳೆದು 'ಟೈ'ಲಿ ಒರೆಸಿಕೊಳ್ತ ವೈದ್ಯರು ಲಿಫ್ಟ್ ಕಡೆ ಓಡಿದರು. ವಿದ್ಯುತ್ ಕಡಿತ ಬಂತು. ಜನರೇಟರ್ ರೂಂ ಬೀಗದ ಕೈ, ಆಕ್ಸಿಜನ್ ಸಿಲಿಂಡರ್ ಸ್ಪ್ಯಾನರ್ ಹುಡುಕುತ್ತ ಹೊರಟರು ಮ್ಯಾನೇಜರ್ ಮಂದಣ್ಣ. ಲಿಫ್ಟ್‌ಗೆ ಕಾಯದೆ ಮೆಟ್ಟಲು ಪಕ್ಕದ ನುಣುಪಾಗಿದ್ದ ಮರದ ಕೈಪಿಡಿ ಮೇಲೆ ಮಲಗಿ ಜಾರುತ್ತ 4ನೇ ಮಹಡಿ ವಾರ್ಡಿಗೆ ಬಂದರು ವೈದ್ಯರು. ಶಾಕ್ ಅಯಿತು ಅವರಿಗೆ, ಪೇಷಂಟ್ ಬಾಲ್ಯಸ್ನೇಹಿತ ಭೀಮಭಟ್ಟನನ್ನು ನೋಡಿ. ಹಳೆ ನೆನಪಿನ ದೋಣಿಯಲ್ಲಿ ತೇಲಿದರು, ಎರಡುಕ್ಷಣ.

ಸೀನಿಯರ್ ಧಾಡಿ ದಾದಿ ಬ್ಲಡ್‌ಸ್ಯಾಂಪಲ್ ತಂದಳು. ವೈದ್ಯರ ಮುಂದೆ ಹಿಡಿದು ಹಾಡಿದಳು ಎಂ.ಟಿ.ವಿ. ರಾಗಗಳಲ್ಲಿ.

"ಇವರ ರಕ್ತದ ಗ್ರೂಪ್ ಗೊತ್ತಾಗ್ತಿಲ್ವಂತೆ ಸಾರ್ ಬ್ಲಡಿ ಲ್ಯಾಬ್ ಟೆಕ್ನಿಷಿಯನ್ ರಕ್ತ ಕಣ್ಣನ್‌ಗೆ. ಪೆಥಾಲಜಿಸ್ಟ್ ಅಸಿಸ್ಟೆಂಟ್ ನಂ. 5 ಪಂಚಾಕ್ಷರಪ್ಪನ್ನ ಎಬ್ಬಿಸಿ ಹೇಳಿದ್ವಿ. ಅವರು 'ನಿಮಗೆ ತೋರಿಸಿ' ಅಂತ ಹೇಳಿ ನಿದ್ರೆ ಹೋದರು. ನಮಗೆ ಏನು ಮಾಡಬೇಕೂಂತ ಗೊತ್ತಾಗ್ತಿಲ್ಲ."

"ಅವಸರ ಬೇಡ" ಅಂದರು ವೈದ್ಯರು. ನಾಡಿ ಮಿಡಿತ, ಹೃದಯದ ಬಡಿತ ಕೇಳಿದರು. ಹೊಟ್ಟೆ ಅದುಮಿದರು, ನಯವಾಗಿ ನೀವಿದರು. ಮೂರು ಅಂಗುಲದ ಮೋಂಬತ್ತಿ ಬೆಳಕಿನಲ್ಲಿ ತಪಾಸಣೆ ಆಯಿತು. ರಕ್ತದ ಸ್ಯಾಂಪಲ್ ಮೂಸಿದರು, ನಗುನಗುತ್ತ ಹೇಳಿದರು. "ನೀವೆ ಮಾಡಬೇಕಾಗಿತ್ತು ಈ ಪರೀಕ್ಷೆ" ಇವನದು P ಪ್ಲಸ್ ಗ್ರೂಪ್ ನಂದೂ ಅದೇ ವರ್ಗ. ಆಪರೇಷನ್ ಅವಶ್ಯಕತೆ ಇಲ್ಲ. ಅವನ ಜೀವ ಈಗ ಪೈನ್‌ಆಪಲ್ ಹಣ್ಣಿನಲ್ಲಿದೆ. ತಕ್ಷಣ ಅದರ ಜ್ಯೂಸ್ ಕುಡಿಸಿ. 2 ನಿಮಿಷಗಳಲ್ಲಿ ಎದ್ದು ಮನೆಗೆ ಹೋಗ್ತಾನೆ.

ರಸ್ತೆ ಪಕ್ಕದ 'ಫಲದರ್ಶಿನಿ'ಯಿಂದ ಜ್ಯೂಸ್ ಬಂತು. ವೈದ್ಯರು ಭಟ್ಟನ ಮೂಗಿಗೆ ಹಿಡಿದರು. ಭೀಮಭಟ್ಟ ತಟಕ್ಕನೆ ಎದ್ದು ಕೂತ. ಬಾಲ್ಯ ಸ್ನೇಹಿತನನ್ನು ನೋಡಿದ ಖುಷಿಯಾಗಿ ಬೆನ್ನಿನ ಮೇಲೆ ಬಲವಾಗಿ ಗುದ್ದಿದ. "ದ್ವಾಪರಯುಗದ ಬುದ್ಧಿ ಇನ್ನೂ

ಬಿಟ್ಟಿಲ್ಲಲ್ಲೋ ಭೀಮ'' ಎಂದರು ವೈದ್ಯರು ಬೆನ್ನು ಉಜ್ಜಿಕೊಂಡು.

''ಈ ರಕ್ತದ ಗ್ರೂಪ್ ಹೆಸರೇ ಕೇಳಿರಲಿಲ್ವಲ್ಲ ಸಾರ್! ನಿಮ್ಮ ಲೇಟೆಸ್ಟ್ ರೀಲ್ ಸ್ಟೋರಿ ಬೇಗ ಹೇಳಿ. ನಮ್ಮ ಪಾಳಿ ಮುಗೀತಾ ಬಂತು'' ಅಂತ ಸುತ್ತಲಿದ್ದವರೆಲ್ಲ ಹಿತವಾಗಿ ಹುಯಿಲೆಬ್ಬಿಸಿದರು.

''ಬೇರೆ ಡಾಕ್ಟರುಗಳ ನಿದ್ರೆಗೆ ತೊಂದರೆ ಆಗಬಾರದು. ಸದ್ದುಮಾಡದೆ ಕೇಳಿ. ಇವನು ನನ್ನೊಟ್ಟಿಗೆ ಹಳ್ಳಿಯಿಂದ ಬಂದ, ಈ ಊರಿಗೆ, ನಾನು ಡಾಕ್ಟರ್ ಆದೆ. ಇವನು A ಕ್ಲಾಸ್ ಅಡಿಗೆ ಕಂಟ್ರಾಕ್ಟರ್ ಆದ. ಆ ರಂಗದಲ್ಲೆ ಹೊಸ ರೆಸಿಪಿ ಮಾಡಿ ಹೆಸರು ಮಾಡಬೇಕು ಅಂತ ಹಠ. ಎಲ್ಲರ ಹೊಟ್ಟೆಮೇಲೆ ಪ್ರಯೋಗ ಮಾಡಿದ ಶ್ರೀಮಂತರ ಅಸಲಿ ಕೇಸರಿಭಾತ್ ಬದಲು ಪೈನ್ ಆಪಲ್ ಕೇಸರಿಭಾತ್, ಹಳೆಕಾಲದ ದುಬಾರಿ ರುಚಿ ನಿಂಬೆಹಣ್ಣಿನ ಗೊಜ್ಜು, ಮೆಂತ್ಯದ ಹಿಟ್ಟಿನ ಗೊಜ್ಜುಗಳ ಬದಲು ಅನಾನಸ್ ಹಣ್ಣಿನ ಗೊಜ್ಜು ಮದುವೆ ತಿಂಡಿ, ಊಟಕ್ಕೆ ಜನಸಾಮಾನ್ಯರಿಗಾಗಿ ಸೃಷ್ಟಿಸಿದ. 'ಭೀಮ ಪ್ರಶಸ್ತಿ' ಅಂತ ಪಾಕಶಾಸ್ತ್ರಗಳಿಗೆ ಇಟ್ಟಿದ್ದರೆ ಇವನಿಗೇ ಬರ್ತಿತ್ತು. ಮಾಡಿದ್ದನ್ನು ರುಚಿ ನೋಡಕ್ಕೆ ಅಂತ ತಿಂದೂ ತಿಂದೂ ಅವನಿಗೂ ನನಗೂ ಪೈನ್‌ಆಪಲ್ ರಕ್ತಗತ. ನಮ್ಮ ರಕ್ತದ ವಾಸನೆ, ಬಣ್ಣ, ರುಚಿ, ಎಲ್ಲ ಪೈನ್ ಆಪಲ್‌ದೆ. ಹೀಗೆ ಬಂತು P ಪ್ಲಸ್‌ಗ್ರೂಪ್. ಈ 'ಭೀಮಸೃಷ್ಟಿ'ಯಿಂದ. ಇವನ ಕೈಚಳಕದಿಂದ ಈ ಕಲ್ಯಾಣನಗರೀಲಿ ಶೇಕಡ 20 ಈ ವರ್ಗಕ್ಕೆ ಬಂದಿದ್ದಾರೆ. ಬಾಕಿ ಮಂದಿಗೆ ಪೈನ್‌ಆಪಲ್ ಅಲರ್ಜಿ ತಂದಿದ್ದಾನೆ. ನನಗಿಂತ ಹೆಚ್ಚು ಪ್ರಖ್ಯಾತ, ಅನುಕೂಲಸ್ಥ. 2001ತನಕ ಬುಕ್ ಆಗಿದ್ದಾನೆ.'' ಎಂದು ತುಂಟನಗೆ ನಕ್ಕು ಭೀಮಭಟ್ಟನ ಭುಜದ ಮೇಲೆ ಕೈ ಹಾಕಿ ಮಾರುತಿಯನ್ನೇರಲು ಸಾಗಿದರು ವೈದ್ಯರು.

''ಈ ಆಸ್ಪತ್ರೇಲಿ ಆಪರೇಷನ್ ಬೇಡ ಅಂತ ಹೇಳೋ ವೈದ್ಯರಿದ್ದರೆ ನಮ್ಮ ಮಕ್ಕಳನ್ನು ನರ್ಸರಿ ಶಾಲೆಗೆ ಸೇರಿಸಕ್ಕೆ ಡೊನೇಷನ್ ಕೊಟ್ಟಹಾಗೇನೆ!'' ಎಂದು ಗೊಣಗಿದರು ಕ್ಯಾಪಿಟೇಷನ್ ಫೀ ಡ್ಯೂಟಿ ಡಾಕ್ಟರುಗಳು, ನರ್ಸ್‌ಗಳು

''ವಿದ್ಯುತ್ ಕಡಿತ ನಿಂತರೆ ನಿಮ್ಮ ಬಯೋಡೇಟಲಿ ಡಾಕ್ಟರ್ ಅಶ್ವಿನ್‌ವೈದ್ಯ ಎಂ.ಆರ್.ಸಿ.ಪಿ. (ಪೈನ್‌ಆಪಲ್ ಕೇಸ್ ಸ್ಪೆಷಲಿಸ್ಟ್) ಅಂತ ತಿದ್ದುಪಡಿ ಮಾಡ್ತೀನಿ ಸಾರ್'' ಎಂದು ನಕ್ಕು ಕೂಗಿದಳು ಕಂಪ್ಯೂಟರ್ ಕಿಶೋರಿ.



# ರೂರಲ್ ಬ್ಯಾಂಕಿಂಗ್!

-ಟಿ.ಎಸ್. ಅಂಬುಜಾ

'ಆಡುಮುಟ್ಟದ ಸೊಪ್ಪಿಲ್ಲ' ಎಂಬಂತೇ, ಈಗ 'ಬ್ಯಾಂಕಿಲ್ಲದ ಊರಿಲ್ಲ' ಎಂಬ ಹೊಸ ಗಾದೆಯನ್ನು ರಚಿಸಬಹುದಾದ ವಾತಾವರಣ ಸೃಷ್ಟಿಯಾಗಿಬಿಟ್ಟಿರುವುದು ತಮಗೆಲ್ಲ ಗೊತ್ತಿಲ್ಲದಿರುತ್ತದೆಯೆ? ಮೆಟ್ರೊಪಾಲಿಟನ್ ಸಿಟಿಯಿಂದ, ಕುಗ್ರಾಮವೊಂದಕ್ಕೆ ವರ್ಗವಾಗಿ ಬಂದಿದ್ದ ನನ್ನ ಆತ್ಮೀಯರ ಅನುಭವದ ಪ್ರಕಾರ, ಪಟ್ಟಣದಲ್ಲಿಯ ಕೆಲಸವೋ, ನೀರಸ - ಯಾಂತ್ರಿಕವಿದ್ದು, ಬೇಸರ ತರುವಂತಾದ್ದು, ಆದರೆ, ಗ್ರಾಮೀಣ ಶಾಖೆಗಳಲ್ಲಿಯ ಹಲವಾರು ರಂಜನೀಯ ಘಟನೆಗಳಿಂದಾಗಿ ವೃತ್ತಿಗೆ ಉತ್ಸಾಹ ಸ್ಫೂರ್ತಿ ತುಂಬಿ ಬಂದೀತು! ಇಲ್ಲಿವೆ ಕೆಲ ಪ್ರಸಂಗಗಳು....

ಆ ಬಾರಿ ಪಂಚಾಯತ್ ಓಟಿಗೆ ನಿಂತ ಅಭ್ಯರ್ಥಿಗಳಲ್ಲಿ ಆತನ ಭಾವನೂ ಒಬ್ಬ. ಆತ ಚುನಾವಣಾ ಪ್ರಚಾರ ನಡೆಸುತ್ತ ಸಾಗಿದ್ದಂತೇ, ಈ ಬ್ಯಾಂಕ್ ಉದ್ಯೋಗಿ ಎದುರಾದರು. ತಡೆದು ನಿಲ್ಲಿಸಿದ ಆತನ ಪ್ರಶ್ನೆ 'ಅಂದ್ಹಾಗೆ, ಮೆನೆಜರ್ರೇ, ನಿಮ್ಗೆ ಇಲ್ಲಿಂದ ಟ್ರಾನ್ಸ್‌ಫರ್ ಆಗ್ಬೇಕೂಂತ ಇದ್ಯಾ?' ಈತನೋ ಕಕ್ಕಾಬಿಕ್ಕಿಯಾಗಿ, 'ಯಾಕೆ ಗೌಡ್ರೆ?' ಎಂದಾಗ, ಆತ್ಮ ವಿಶ್ವಾಸಭರಿತ ಆಶ್ವಾಸನೆ ಆತನದು... ''ಅಂದ್ರೆ ನಾನು ಮನ್ಸು ಮಾಡಿದ್ರೆ, ನಿಮ್ಗೆ ಒಂದ್ ತಿಂಗ್ಳೊಳಗೆ ವರ್ಗ ಮಾಡ್ಸೋಷ್ಟು ತಾಕತ್ತುಂಟು ಗೊತ್ತಾ?''

ಈತನಿಗೋ, ನೀರಿಗೆ ತಾಪತ್ರಯವಿರುವ, ಉತ್ತಮ ಶಾಲೆಗಳಿಲ್ಲದ, ಸೆಗಣಿ ಭರಿತ ರಸ್ತೆಗಳುಳ್ಳ ಈ ಊರಿಂದ, ಒಮ್ಮೆ, ಬೇರೆ ಊರಿಗೆ ಹೋಗಿ, ಶಹರದ ಬಿಡಾರದಲ್ಲಿರುವ ಹೆಂಡತಿ ಮಕ್ಕಳನ್ನು ಕರೆಸಿಕೊಳ್ಳುವಾಸೆ ಉಕ್ಕದಿದ್ದೀತೆ? ಹಾಗಾಗಿ ಟ್ರಾನ್ಸ್‌ಫರ್ ಬೇಕಂತೇನೊ ಉಂಟು. ಆದ್ರೆ, ನಮ್ಗೆ, ಒಂದು ಟರ್ಮಾದರೂ ಈ ರೂರಲ್ ಬ್ಯಾಂಕಿಂಗ್ ಮಾಡ್ಲೇಬೇಕಾಗ್ತದಲ್ಲಾ ಗೌಡ್ರೇ. ಇನ್ನು ನಿಮ್ಗೆ ಯಾರಾದ್ರೂ ಇನ್‌ಫ್ಲುಯೆನ್ಸ್ ಮಾಡಿಸಿಕ್ಕಾಗ್ತದಾದ್ರೆ, ದಯವಿಟ್ಟು, ಹಾಗ್ಮಾಡಿದ್ರೆ ಉಪಕಾರವಿತ್ತು! ಎಂದರು.

'ಅದ್ರ ಬಗ್ಗೆ ನೀವೇನೂ ಯೋಚಿಸ್ಬೇಡಿಸರ್ ನಾನೆಲ್ಲಾ ನೋಡ್ಕೋಳ್ತೇನೆ. ಆದ್ರೆ, ನಿಮ್ಮಿಂದ ನಮ್ಗೂ ಒಂದ್ ಕೆಲ್ಸಾಗ್‌ಬೇಕು. ನಿಮ್ ಬ್ಯಾಂಕಿಗೆ ಬಂದವ್ರಿಗೆಲ್ಲಾ, ಈ ಹ್ಯಾಂಡ್‌ಬಿಲ್ಸ್ ಕೊಟ್ಟು, ನಮ್ ಭಾವನಿಗೇ ಓಟು ಹಾಕ್ಬೇಕೂಂತ, ಒಪ್ಪಿಸ್ಬೇಕು ಅಷ್ಟೆ. ಅಂದ! ಅದಕ್ಕೂ 'ಹ್ಞೂ' ಅನ್ನುತ್ತ, ಅವನಿಂದ ಹಸ್ತಪ್ರತಿಗಳನ್ನು ತೆಗೆದುಕೊಳ್ಳುತ್ತಲೇ, ಮತ್ತೆ ಪ್ರಶ್ನಿಸಿದರು ಈತ ''ಅಲ್ಲಾ ನಿಮ್ಗೆ ಯಾರ ಗುರ್ತು ಉಂಟದ್ರೀ.....?

ಆತ ಗಹಗಹಿಸುತ್ತ ಉತ್ತರಿಸಿದ್ದೇನು? ಗುರ್ತು - ಪರಿಚಯ ಎಂತದೂ ಇಲ್ಲ, ನನ್ ಹಿಂದೆ ನೂರಾರು ಮಂದಿ ಇದ್ದಾರಲ್ಲಾ? ಎಲ್ರ ಸಹಿ ಹಾಕ್ಸೋದು, ಅರ್ಜಿ ಬರೆಯೋದು, 'ನಮ್ಗೆ ಈ ಜನಾ ಸೇರೊದಿಲ್ಲ. ಇವರ್ನ ತೆಗ್ದು, ನಮ್ಮೂರಿಗೆ ಬೇರೆಯೋರನ್ನ ಹಾಕಿ' ಅಂತ ನಿಮ್ಮ ಹೆಡ್ಡಾಫೀಸ್‌ಗೆ ಬರ್ದ್ರಾಯ್ತು. ಅದ್ಕೇನಾಗ್ಬೇಕು? ಮರುವಾರವೇ ಠಪ್ಪಂತ ನಿಮ್ಗೆ ಆರ್ಡರ್ ಬಾರ್ದಿದ್ರೆ ಹೇಳಿ''!

ಆ ರೂರಲ್ ಬ್ರಾಂಚ್ ಮೆನೇಜರರೋ ಸುಸ್ತಾಗಿ, ತನಗೆ ಖಂಡಿತಾ ಅಲ್ಲಿಂದ ಟ್ರಾನ್ಸ್‌ಫರ್ ಬೇಡವೆಂದೂ, ಆತ ತೊಂದರೆ ತೆಗೆದುಕೊಳ್ಳುವ ಅಗತ್ಯವಿಲ್ಲವೆಂದೂ, ಮತ್ತೆ ಮತ್ತೆ ಹೇಳಬೇಕಾಯ್ತಂತೆ!

ದಕ್ಷಿಣ ಕನ್ನಡದ ಹಳ್ಳಿ ಶಾಖೆಯೊಂದರ ಉದ್ಯೋಗಿ ಆತ. ಒಮ್ಮೆ, ಒಬ್ಬ ಆಢ್ಯವ್ಯಕ್ತಿ ತಾವು ಕರೆತಂದ ನಾಲ್ಕು ಜನರಿಗೆ IRDP ಸಾಲ ಕೊಡಲೇಬೇಕೆಂದು ಒತ್ತಾಯಿಸುತ್ತ, ಮಾತುಗಳ ಮಧ್ಯೆ, ಪ್ರಭಾವ ಬೀರುವಂತೆ, ''ನಾನೂ ಪೂಜಾರಿಯೂ, ಒಟ್ಟಿಗೇ ಶಾಲೆಗೆ ಹೋದವರು. ಈಗ್ಲೂ ಸಿಕ್ಕಿದ್ರೆ, ಐದ್‌ನಿಮಿಷಾದ್ರೂ ಮಾತಾಡ್ದೆ ಇರುದಿಲ್ಲ ಅವ' ಎಂದರು. ಮ್ಯಾನೇಜರರೋ ಹಾಸ್ಯಪ್ರವೃತ್ತಿಯವರು. ಆತನನ್ನು ಸ್ಟಾಫ್ ಒಬ್ಬರ ಎದುರು ಕರೆತಂದು 'ಇವ್ರು ಯಾರು ಗೊತ್ತಾ?' ಎಂದರು. ಅಸಂಬದ್ಧ ಪ್ರಶ್ನೆಯಿಂದ ತಬ್ಬಿಬ್ಬಾದರೂ, ಆತ ತೋರಿಸದೆ ಗೊತ್ತಿಲ್ಲ ಯಾಕೆ?' ಎಂದಾಗ, ಆ ಬ್ಯಾಂಕರ್ ನಗುತ್ತಾ ಹೇಳಿದರು.... 'ಇವ್ರೇ ಶ್ರೀ ಮಹಾಬಲೇಶ್ವರ ಹೆಗಡೆ. ನಮ್ ಮಾನ್ಯ ಮುಖ್ಯಮಂತ್ರಿಗಳ (ಆಗ, ರಾಮಕೃಷ್ಣ ಹೆಗಡೆ) ಅಣ್ಣನ ಮೊಮ್ಮಗ! ಈಗ ಬ್ಯಾಂಕಿಡೀ ನಗೆಗಡಲಲ್ಲಿ ಮುಳುಗಿತ್ತು!

ಉತ್ತರಕರ್ನಾಟಕದ ಆ ಹಳ್ಳಿಗೆ ಆ ಕ್ಲರ್ಕ್ ಹೊಸತಾಗಿ ಬಂದಿದ್ದ. ಗತ್ತಿನ ವ್ಯಕ್ತಿಯೊಬ್ಬ, ತನ್ನ ಹಳೇ ಪಾಸ್‌ಬುಕ್ ಹರಿದುದರಿಂದ, ಬೇರೊಂದು ಪುಸ್ತಕಕ್ಕೆ ಎಲ್ಲವನ್ನೂ ಎಂಟರ್ ಮಾಡಲು ತಿಳಿಸಿ 'ಸ್ವಲ್ಪ ಹೊತ್ ಬಿಟ್ ಬರ್ತೀನಿ ಬಯ್ಯಕ್ಕೆ' ಎಂದು ಹೊರನಡೆದ. ಅಂದು, ಊರ ಸಂತೆಯ ದಿನ ಬೇರೆ. ಸುತ್ತುಮುತ್ತಲಿನ ಹಳ್ಳಿಗರಿಗೆಲ್ಲ 'ಸಂತೆ' ಪರ್ಚೇಸಿಂಗ್‌ನೊಂದಿಗೇ, ಬ್ಯಾಂಕ್ ವ್ಯವಹಾರವೂ ಆಗಬೇಕಿತ್ತು ಹಾಗಾಗಿ ಆ 'ಪಾಸ್‌ಬುಕ್' ಬದಿಗಿರಿಸಿ, ಬೇರೆ ಕೆಲಸ ಮುಂದರಿಸಿದ್ದ ಈತ.

ತುಸು ಹೊತ್ತಿಗೆ ಬಂದ ಆತ, 'ಪಾಸ್ ಬುಕ್ ರಡಿಯೋ?' ಎಂದ ಉಡಾಫೆಯಿಂದಲೇ ಕೇಳಿದಾಗ, ಈತನೆಂದ ... 'ನೀವು ಹಾಗೇ ಹೋದ್ರೆ ಹ್ಯಾಗೆ? ಸ್ವಲ್ಪ ಕೂತ್ಕೊಳ್ಳಿ. ಮಾಡ್ಕೊಡ್ತೇನೆ ಮತ್ತೆ... ಅದಕ್ಕೆ ಒಂದ್ರುಪಾಯಿ ಚಾರ್ಜ್ ಆಗ್ತದೆ''

ಆತನಿಗೋ ಕೋಪ....'ಅಯ್ಯ!ನೀ ಒಂದ್ರುಪಾಯಿ ಯಾಕ, ಐದ್ರುಪಾಯಿ ಬೇಡಿದ್ರೂ, ನಾಕೊಡಾಕ್‌ತಯಾರಿಲ್ಲಾ? ಅದ್ರ ಸಲುವಾಗಿ ಯಾಕ ತಡ ಮಾಡ್ತಿದೀ? ನೀ ಆಗ್ಲೆಯಾಕ ಬೇಡ್ಲಿಲ್ಲ?' ಎಂದು ಗದರಿಸಿದ್ದ!

ಈತನೋ ದಕ್ಷಿಣ ಕನ್ನಡದಾತ ಬೇರೆ! (ಸಲುಗೆಯಿರದ) ಹೈಸ್ಕೂಲ್ ಮಕ್ಕಳನ್ನೂ 'ಬನ್ನಿ, ಹೋಗಿ' ಎಂದು ಬಹುವಚನದಲ್ಲಿ ಮಾತನಾಡಿಸುವ ಪ್ರದೇಶ ಅದು! ತನ್ನನ್ನು 'ನೀನು' ಎಂದು ಸಂಭೋಧಿಸಿದಲ್ಲದೇ 'ಬೇಡು' ಎನ್ನುವನಲ್ಲ.

ಈಗ ಕ್ಲರ್ಕ್‌ನ ಅಬ್ಬರ.....'ಬೇಡ್ಲಿಕ್ಕೆ ನಾವೇನ್ ಭಿಕ್ಷುಕರಾ? ಅಥವಾ ನಿಮ್ಮ ಕೂಲಿಯವ್ರಂತ ತಿಳ್ಕೊಂಡಿದ್ದೀರಾ? ಗೌರವ ಕೊಟ್ಟು ತೆಕ್ಕೊಳ್ಳಿಕ್ಕೆ ಗೊತ್ತಿಲ್ವಾ?

ಎದುರಿನವರ ಏರುದನಿಯಿಂದ, ಆತನೂ ತುಸು ಸಪ್ಪಗಾದನೇನೋ? 'ಅಯ್ಯ! ನಾನ್ ಏನ್ ಮರ್ಯಾದಿ ಕಮ್ಮಿ ಮಾಡ್ದೇಪ್ಪಾ ನಿನ್ಗ? ನೀನ್ ರೊಕ್ಕ ಬೇಡ್ದ್ರೋ ತಾನೇ, ನಮಗೊತ್ತಾಗೋದು!' ಎಂದ!

ಮತ್ತೆ ಏಕವಚನ ಪ್ರಯೋಗದಿಂದ ಕುಪಿತನಾದ ಈತ ಕೂಗಿದ 'ನಾಲಿಗೆ ಬಿಗಿಹಿಡ್ದು ಮಾತಾಡಿ ಅಯ್ಯಾ'.

ಗಲಾಟೆ ಕೇಳಿ ಇತರ ಸಹೋದ್ಯೋಗಿಗಳೂ, ಪ್ರಬಂಧಕರೂ ಓಡಿಬಂದರು. ಜಗಳದ ಮೂಲ ಕಾರಣ ಕೇಳಿ ಎಲ್ಲರೂ ನಗುವವರೇ! ಯಾಕೆ ಗೊತ್ತೆ? ಉತ್ತರ ಕರ್ನಾಟಕದ ಆಡು ಮಾತಿನಲ್ಲಿ 'ಬೇಡು' ಅಂದರೆ 'ಕೇಳು' ಅಥವಾ 'ಆಜ್ಞಾಪಿಸು' ಎಂಬರ್ಥವಂತೆ!

ಅಂತೂ, ವಿಶ್ವಸಂಸ್ಥೆಯದರಂತಹ 'ಮಧ್ಯ ಪಂಚಾತಿಕೆ' ಯಿಂದುಂಟಾದ ಶಾಂತಿ ಸ್ಥಾಪನೆಯ ನಂತರ, ಆತ, ಈತನ ಬಳಿ ಬಂದು, ''ಲೋ ತಮ್ಮ, ನಾವು ತಲೆ ಹಣ್ಣಾದ ಮುದುಕ್ರಿಗೂ 'ನೀನು' ಅಂತ್ಲೇ ಅನ್ನೋದು ಇನ್ನು, ನಿನ್ ಹಾಗಿನ ಚಿಗುರು ಮೀಸೆ ಹುಡ್ಗಂಗೆ 'ನೀವು-ತಾವು' ಅನ್ಬೇಕೂಂತ ನಮ್ಗಾದ್ರೂ ಹ್ಯಾಗ್ ತಿಳೀಬೇಕಪ್ಪ?'' ಅಂದಾಗ, ಈ ಇಪ್ಪತ್ತೆರಡರ ಯುವಕನೂ ನಗುತ್ತಲೆ, ''ಪರ್‍ವಾಗಿಲ್ಲಬಿಡಿ'' ಅಂದರು! ಬಹುಶಃ ತನ್ನ ಶೀಘ್ರಕೋಪಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದರೇನೋ? ಆತನೋ, ಹೊರಡುತ್ತಿದ್ದಂತೇ, 'ಭ್ಯಾಗ್ನೆ ಇಲ್ಲಿ ಭಾಷೆ ಕಲ್ತುಕೊಳ್ರಪ್ಪ. ನಮ್ಗೂ ನಿಶ್ಚಿಂತೆಯಿಂದ ಮಾತಾಡೋಕಾಗುತ್ತೆ' ಎಂದ!

ಇನ್ನು, 'ಎಮ್ಡಿ ಮನೇಜರ್' (Rural development officer) ಸಾಲದ್ ಸ್ಯಾಬ್ರು (Loans department officer) ರೊಕ್ಕಾ ಇಸ್ಕೊಳ್ಳೊ ಸಾಹೇಬ್ರು (Cashier) ಬಂಗಾರದ್ ಸ್ಯಾಬ್ರು (Jewel affriser) ದಡ್ ಸಾಹೇಬ್ರು (ದೊಡ್ಡ= Manager) ಜವಾನ್ ಸ್ಯಾಬ್ರು (Attender) ಇತ್ಯಾದಿತ್ಯಾದಿ ಪದಕೋಶಗಳ ಅರ್ಥ ವಿವರಿಸ ಹೊರಟರೆ, ಅದೇ ಇನ್ನೊಂದು ಬರಹವಾಗಿ ಬಿಟ್ಟೀತೇನೋ!

ಅಂತೂ, ಈಗ ತಾವುಗಳೂ, ಈ 'ರೂರಲ್ ಬ್ಯಾಂಕಿಂಗ್'ನ ಮನೋರಂಜನೆಯ (ಕಹಿ) ಸವಿಯನ್ನು ಅರ್ಥೈಸಿಕೊಂಡಿರಬೇಕಲ್ಲವೆ? ★



''ಕೊನೇ ಸ್ಟಾವರೆಗೂ ಕಾಯಲೇ ಬಾರ್ದು. ಎರಡನೇ ಮೂಟೆ ಏರಿಸಿದಾಗಲೇ, ಹೀಗೆ ಉಸ್ಸಪ್ಪಾ ಅಂತ ಕೂತ್ಕೋಬೇಕು, ಕಣೋ''

# ಪ್ರಶಸ್ತಿ ಸಿಗುತ್ತೆ ತಾನೆ!

ಹಾ.ರಾ.

ಅವತ್ತು ಫ್ಯಾಕ್ಟರಿ ಕೆಲಸ ಮುಗಿಸಿಕೊಂಡು ಮನೆಗೆ ಬರೋಹೊತ್ತಿಗೆ ಸಂಜೆ ಆಗಿತ್ತು. ಕನ್ನಡ ಚಿತ್ರಗೀತೆ ಕೇಳ್ತಾ ಕೂತಿದ್ದೆ. ಒಬ್ಬ ಕುರುಚಲು ಮೀಸೆ ಆಸಾಮಿ ಬಾಗಿಲ ಬಳಿ ಕಾಣಿಸಿಕೊಂಡ. ನೋಡುಕ್ಕೆ ಕಟ್ಟುಮಸ್ತಾಗಿದ್ದ. ಕಚ್ಚೆಪಂಚೆ, ಜುಬ್ಬ, ಟೋಪಿ ಧರಿಸಿದ್ದ, ಒಳ್ಳೆ ಠೀವಿಯಿಂದ ಒಳಕ್ಕೆ ಬಂದು ''ನಮಸ್ಕಾರ ಸಾರ್'' ಎಂದ. ಜೋಡಿಸಿದ ಕೈಗಳ್ನ ತೊಳೀತಾನೆ ಇದ್ದ! ಚಂದ ಬಾಬ್ತಿರಬೇಕು ಎಂದುಕೊಂಡೆ. ಆದರೆ ಅವನು ''ಸಾರ್, ನಾವು ರಾಜಾಮಹಲ್ ಗುಟ್ಟಳ್ಳಿ ಹತ್ರ ಇರೋ ಒಂದು ಸ್ಲಮ್‌ನವರು. ರಾಯಲು ಸೀಮೆಯಿಂದ ಇಲ್ಲಿಗೆ ವಾಸಕ್ಕೆ ಬಂದು ಸುಮಾರು ವರ್ಷ ಆಯ್ತು. ನಮ್ಮಕ್ಳನ್ನ ಕನ್ನಡ ಸ್ಕೂಲಿಗೇ ಕಳಿಸ್ತಿದೀವಿ'' ಎಂದ ನಿಧಾನವಾಗಿ.

''ಸರಿಯಪ್ಪ, ಕನ್ನಡ ಸ್ಕೂಲಿಗೆ ಕಳಿಸ್ದೆ ಇನ್ನೇನುತಾನೆ ಮಾಡೋಕಾಗುತ್ತೆ, ಹತ್ತು, ಇಪ್ಪತ್ತು ಎಲ್ಲಿಂದ ತರ್ತೀರ'' ಎಂದೆ ನಾನು. ಅವನಿಗೆ ನನ್ನ ಮಾತು ಹಿಡಿಸ್ಲೋ ಏನೋ, ನಗ್ತಾ ನಗ್ತಾ ರಾಜಮಂಡ್ರಿ ಭಾಷೇಲಿ ತನ್ನ ಕಥೆ ಹೇಳ್ಕೊಂಡ. ಆ ಸ್ಲಮ್ಮಿಗೆ ಇವನೇ ಲೀಡರ್ ಅಂತೆ. ಇಂಗ್ಲೀಷು, ತೆಲುಗು ಮಿಕ್ಸ್ ಮಾಡಿ ಕನ್ನಡದಲ್ಲಿ ಮಾತಾಡೋದು ಕಲ್ತಿದಾನೆ!

''ಸಾರ್, ನಾವು ಒಂದು ಸಂಘ ಮಾಡ್ಕೊಂಡಿದೇವೆ. ಕೊಳಚೆ ಟಿ.ವಿ. ವೀಕ್ಷಕರ ಸಂಘ ಅಂತ ಅದರ ಹೆಸರು. ನಾವು ಕನ್ನಡ ರಾಜ್ಯೋತ್ಸವ ಆಚರಿಸುತ್ತಾ ಇದೀವಿ'' ಅಂತ ಪೀಠಿಕೆ ಹಾಕಿದ. ಅವರ ಸಂಘದ ಹೆಸರು ಕೇಳಿ ನನಗೆ ಖುಷಿ ಆಯ್ತು! ಆದರೂ ಅವನು ಹೇಳಿದ್ದು ಅರ್ಥವಾಗ್ದೆ ''ಆ ಹೆಸರಿನ ಇನ್ನೊಂದು ಹೊಸ ಛಾನಲ್ ಏನಾದ್ರೂ ಬಂದಿದೆಯೇನ್ರಿ'' ಅಂತ ಕೇಳಿದೆ.

''ನಮ್ಮ ಟಿ.ವಿ. ಲಿ ಯಾವ ಛಾನಲ್ಲೂ ಬರ್ತಾ ಇಲ್ಲ ಸಾರ್, ಎಲ್ಲಿ ನೋಡಿದರೂ ಬರೀ ಛಾನಲ್‌ಗಳೇ'' ಎಂದ.

''ಮೇಲ್ದಂಡೆಯದೆ? ಕೆಳದಂಡೆಯದೆ?'' ಎಂದೆ ನಾನು ಯಾವುದೋ ಜ್ಞಾನದಲ್ಲಿ ಪೇಪರ್ ಓದ್ತಾ.

''ಅಯ್ಯೋ! ಅಯ್ಯೋ! ಕೃಷ್ಣ ಕೃಷ್ಣ! ಆ ಛಾನಲ್‌ಗಳಲ್ಲ ಸಾರ್, ಸ್ಲಮ್ ತುಂಬ ಚರಂಡಿಗಳು'' ಅಂತ ನಾನು ಹೇಳಿದ್ದು ಎಂದ. ನೆಕ್ಸ್‌ಲೈಟುಗಳ ಊರಿನವನು. ಪಟಿಂಗ ಎಂದುಕೊಂಡೆ!

''ನಿಮ್ಮ ಸಂಘಕ್ಕೆ ನನ್ನಿಂದ ಏನಾಗ್ಬೇಕು'' ನೇರವಾಗಿ ಕೇಳಿದೆ ನಾನು. ಅದಕ್ಕೆ ಅವನು ಎಲ್ಲಿಂದ ಲೋಕ ಕಥೆ ಪ್ರಾರಂಭಿಸಿ, ಸಾರ್, ನಮ್ಮ ಸ್ಲಮ್ಮಿಗೆ ರಾಜ್ಯಸರ್ಕಾರ ಉದಾರ ಆರ್ಥಿಕ ನೀತಿಕೆಳ್ಗೆ ಒಂದು ಟಿ.ವಿ. ಉಚಿತವಾಗಿ ಕೊಟ್ಟಿದೆ. ನಮ್ಮನ್ನು ಇಪ್ಪತ್ತೊಂದನೆ ಶತಮಾನಕ್ಕೆ ಕರೆದೊಯ್ಯುತ್ತಾರಂತೆ'' ಎಂದ.

''ಒಯ್ದರೆ ಒಯ್ಲಿ ಬಿಡಿ, ಮೊದಲು ನೀವು ಹೋಗಿ ನಾವು ಆಮೇಲೆ ಬರ್ತೀವಿ'' ಎಂದೆ ನಾನು.

''ಅದನ್ನೆ ಸಾರ್ ನಿಮಗೆ ತಿಳಿಸಿ, ರಿಕ್ವೆಸ್ಟ್ ಮಾಡ್ಕೊಳ್ಳೋಕೆ ಬಂದಿರೋದು; ನಮ್ಮ ಟಿ.ವಿ. ಲಿ ಚಿತ್ರ, ಧ್ವನಿ ಯಾವೂ ಈಗ ಬರ್ತಿಲ್ಲ. ಅದರ ಬಣ್ಣಾನೂ ಈಗ ಪೂರ್ತಿ ಬಯಲು ಯಾವುದೋ ವೈರಸ್ ರೋಗ ಇರಬೇಕು ಸಾರ್.'' ಎಂದ ಗದ್ಗ ಸ್ವರದಲ್ಲಿ.

ಕಂಪ್ಯೂಟರ್‌ಗಳಿಗೆ ವೈರಸ್ ರೋಗ ಬರುತ್ತೆ ಅಂತ ಕೇಳಿದ್ದೆ. ಟಿ.ವಿ.ಗೂ ಆ ರೋಗ ಬಂದ್ರೆ ಏನಪ್ಪ ಗತಿ ಎಂದುಕೊಂಡೆ ಮನಸ್ಸಿನಲ್ಲಿ!

''ನೀವು ಗಾಬ್ರಿ ಪಡುಬೇಕಾಗಿಲ್ಲ ಸಾರ್, ರಾಜ್ಯೋತ್ಸವಕ್ಕೆ ಛಾನಲ್‌ಗಳನ್ನ ಕ್ಲೀನ್ ಮಾಡ್ಸಿದೇವೆ. ಈಗ ವೈರಸ್ ಇಲ್ಲ'' ಎಂದ ಅವನು!

''ಇಲ್ಲಿ, ಇಲ್ಲದೆ ಹೋದರೆ ಏನಂತೆ ಬಿಡಿ, ಎಲ್ಲಾದರೂ ಒಂದು ಕಡೆ ಇದ್ದೇ ಇರುತ್ತೆ. ಈಗೇನು ದೇಶದ ತುಂಬಾ ಹೊಸ ಹೊಸ ವೈರಸ್‌ಗಳು ಕಾಣಿಸಿಕೊಳ್ತಾ ಇದೆ. ಸಿ.ಬಿ.ಐ. ಗೆ ಬರೀರಿ'' ಎಂದೆ!

''ಸಿ.ಬಿ.ಐ.ಗೇನು ಸಾರ್, ನಾವು ಸರ್ಕಾರಕ್ಕೆ ಬರದ್ವು, ಆದರೂ ವೈರು, ಮೆಕ್ಯಾನಿಕ್‌ನ ಕಳಿಸಿಕೊಡಲಿಲ್ಲ ಸಾರ್. ವೈರುಗಳೆಲ್ಲ ಕಳಚಿಕೊಂಡು ಬಿದ್ದಿವೆ. ನಾವು ಕೈ ಹಾಕಬಾರದಂತೆ! ಮುಟ್ಟಲೂ ಕೂಡ್ದಂತೆ'' ಎಂದ ಸ್ವಲ್ಪ ನಿರುತ್ಸಾಹದಿಂದ. ನನ್ಗೆ ಆವಾಗ ಕೊಂಚ ಉತ್ಸಾಹ ಚಿಮ್ಮಿದ ಹಾಗಾಯ್ತು. 'ಆಮೇಲೆ ಏನು ಮಾಡಿದ್ರಿ' ಅಂತ ಕೇಳ್ದೆ.

''ಅದಕ್ಕೇ ಸಾರ್ ಈಗ ನಮ್ಮ ಕೊಳಚೆಖಾತೆ ಮಂತ್ರಿಗಳ್ನ ಕರಸ್ತಾ ಇದೀವಿ! ನೀವು ಬಂದು ಕಾರ್ಯಕ್ರಮಾನ ಚೆನ್ನಾಗಿ ನಡೆಸಿಕೊಡಬೇಕು'' ಎಂದ, ನಯವಾಗಿ ಆಕಾಶಾನ ನೋಡ್ತಾ!

ನಾನು ನಿತ್ಯ ಸ್ನಾನ ಮಾಡ್ತೇನಲ್ಲ, ಇವರ ಸಂಘಕ್ಕೆ ನನ್ನನ್ನೇಕೆ ಕರೀತಾರೆ ಎಂಬುದೇ ನನಗರ್ಥವಾಗ್ಲಿಲ್ಲ. ನನಗೆ ಭಾಷಣ ಮಾಡೋಕೆ ಬರುಲ್ಲ, ನಾನು ರಾಜಕಾರಣಿ ಅಲ್ಲ. ಲೇಖಕ, ಸಾಹಿತಿಯಂತೂ ಅಲ್ಲ. ಊರ್ನಲ್ಲಿ ಎಷ್ಟೊಂದು ಜನ ಪ್ರಚಂಡ ಭಾಷಣಕಾರರಿರೋವಾಗ ಈ ಹಾಳಾದವನು ನನಗ್ಯಾಕೆ ಗಂಟುಬಿದ್ದ! ರಾಂಗ್ ಅಡ್ರೆಸ್ ಇರಬೇಕು. ಗುರುತು ಸಿಕ್ಕಿಲ್ಲ ಅಯೋಗ್ಯನಿಗೆ ಅವನ ಮನಸ್ನಲ್ಲಿ ಯಾರೋ ಬೇರೆಯವರಿರಬೇಕು. ಹೀಗೆಲ್ಲ ಯೋಚಿಸುತ್ತ ನಾನು ಆ ಸಂಜೆ ಒದ್ದಾಡಿದೆ. ಇರಲಿ, ಅವನ ಒಳ ಮನಸ್ಸು ತಿಳಿಯೋಣ ಅಂತ ಪಾಟಿಸವಾಲು ಮಾಡೋ ಹಾಗೆ ಪ್ರಶ್ನೆ ಹಾಕಿದೆ. ಘಾಟಿ, ಗುಟ್ಟು ಬಿಟ್ಟುಕೊಡಲಿಲ್ಲ. ನಾನೇ ಆಖೈರಾಗಿ ''ಊರ್ನಲ್ಲಿ ತುಂಬ ದೊಡ್ಡ ಮನುಷ್ಯರಿದಾರೆ. ಕನ್ನಡಕ್ಕೆ ದುಡಿದಿದಾರ. ಅವರ್ಯಾರನ್ನಾದರೂ ಕರೀಬಹುದಲ್ಲ'' ಎಂದೆ ಮತ್ತೆ! ಅದಕ್ಕೆ ಅವನು ''ನೀವೇನು ಕಡಿಮೆ ಸಾರ್, ಕನ್ನಡ ಛಾನಲ್ ಡಿ.ಡಿ-9 ಹಾಕಿದೀರ! ನೀವು ಓದ್ತಾ ಇರೋ ಪೇಪರ್ರೂ ಕನ್ನಡ. ಮನೆಯವರ್ನ ಕನ್ನಡದಲ್ಲೇ ಬೈತಾ ಇದೀರಿ! ನನ್ಗೆಲ್ಲ ಗೊತ್ತು ಸಾರ್'' ಎಂದ. ಎಲಾ! ಮಗನೆ ಇವನ್ನ ಹೀಗೇ ಬಿಟ್ಟರೆ ಮನೆ ಒಳ್ಗೆ ಬಾಂಬ್ ಇಡ್ತಾನೆ ಅಂತ ಸ್ವಲ್ಪ ಎಚ್ಚರಿಕೆ ವಹಿಸಿ ಖಂಡಿತ ಆಗೊಲ್ಲ ಎಂದೆ. ಅವ ಬಿಡಬೇಕಲ್ಲ. ತೆನಾಲಿ ಕಡೆಯವನು, ಶತಮೊಂಡ. ''ನೀವು ಒಪ್ಕೊಳ್ಳದೆ ಹೋದ್ರೆ ಕಿತ್ತೂರ್ ಎಕ್ಸ್‌ಪ್ರೆಸ್ಸಿಗೆ ತಲೆ ಕೊಡ್ತೇನಿ. ಊರಿಗೆ ಕಾಗ್ದ ಬರದುಬಿಡಿ'' ಅಂತ ಹೇಳಿ ಅಡ್ರೆಸ್ ಬರದಿದ್ದ ಚೀಟಿ ಕೊಟ್ಟ. ನನಗೆ ಏನು ಮಾಡುವುದಕ್ಕೂ ತೋಚಲಿಲ್ಲ. ಕೋಪದಿಂದ ''ನನ್ನನ್ನೇಕೆ ಪೀಡಿಸ್ತೀಯ, ತೊಲಗು'' ಎಂದೆ. ಆವನಿಗೆ ಏನು ಕೇಳಿಸ್ತೋ, ''ಔನಂಡಿ, ಮಾದಿ

ತೆಲಗು' ಎಂದ! ಶನಿ ಬಿಡೋ ಹಾಗೆ ಕಾಣಿಸಲಿಲ್ಲ. ಪಟ್ಟು ಹಿಡಿದು ಕೂತುಕೊಂಡು ''ನಮ್ಮ ಕಾರ್ಯಕ್ರಮಕ್ಕೆ ನಿಮಗಿಂತ ಬೇರೆ ಸ್ಯೂಟೆಬಲ್ ಪರ್ಸನ್ ಇಲ್ಲ ಸಾರ್, ನಾನ್‌ಕಾಂಟ್ರವರ್ಶಿಯಲ್ ಅಂದ್ರೆ ನೀವು'' ಎಂದ.

ನನಗೆ ಅವ್ನ ಮಾತುಗಳು ಅರ್ಥವಾಗ್ಲಿಲ್ಲ. ಇವನು ಬಿಡೊಲ್ಲ ಅಂತ ಖಚಿತವಾದ ಮೇಲೆ ನನ್ನ ಮನಸ್ಸಿನಲ್ಲೂ ಹೊಸ ಆಸೆಗಳು ಚಿಗುರಿದವು. ಇಷ್ಟೊಂದು ಅಭಿಮಾನದಿಂದ ಕರೀತ ಇರೋವಾಗ ತಿರಸ್ಕರಿಸೋದು ಹ್ಯಾಗೆ. ಜೊತೆಗೆ ಹಾರದ ಆಸೆ! ನೂರಕ್ಕೆ ನೂರರಷ್ಟು ಕನ್ನಡಿಗನಾದ ನನಗೂ ಭಾಷಾಭಿಮಾನ ಇಲ್ಲವೆ? ಅವಕಾಶ ಬಂದಿರೋವಾಗ ಕನ್ನಡದ ಕೆಲ್ಸಾನ ಕಿಂಚಿತ್ತಾದ್ರೂ ಮಾಡೋಣ ಎಂದೆನಿಸಿತು. ಸಂತೋಷದಿಂದ ಒಪ್ಪಿಕೊಂಡೆ ಒಂದೆರಡು ಮಾತಾಡಿದರಾಯ್ತು ಅಂತ! 'ಸುಲಿದ ಬಾಳೆಯ ಹಣ್ಣಿನಂದದಿ' ಪದ್ಯ ಬರುತ್ತೆ. ಅದನ್ನೇ ರಾಗವಾಗಿ ಹೇಳಿದರೆ ಸಾಕು ಎಂದುಕೊಂಡೆ!

ರಾಜ್ಯೋತ್ಸವದ ದಿನ ಬಂದೇ ಬಂತು. ಕನ್ನಡದ ಕೆಲಸವೂ ದೇವರ ಕೆಲಸತಾನೆ! ಅದಕ್ಕೇ ಫ್ಯಾಕ್ಟರಿ ಯೂನಿಫಾರಂ ಹಾಕ್ಕೊಂಡೇ ಹೊರಟೆ. 'ಸೊಳ್ಳೆ ಕಾಟ, ಒಂದು ಶಾಲು ತಂದಿರಿ' ಎಂದು ಕಾರ್ಯದರ್ಶಿ ಹೇಳಿದ್ದ.

ಅವತ್ತು ನನ್ನನ್ನು ಒಂದು ಎತ್ತರದ ಅಟ್ಟಣೆಗೆ ಮೇಲೆ ಕೂರಿಸಿ ಮರುಕ್ಷಣದಲ್ಲಿಯೇ 'ಇಳಿದು ಬಾ, ಇಳಿದು ಬಾ' ಎನ್ನುವ ಹಾಡನ್ನು ಲಾಡ್‌ಸ್ಪೀಕರುಗಳಲ್ಲಿ ಹಾಕಿ ಕೇಳಕ್ಕಿಳಿಸಿದರು! ಅಷ್ಟು ಹೊತ್ತಿಗೆ ಮಂತ್ರಿಗಳು ತಮ್ಮ ಪರಿವಾರ ಸಮೇತ ಬಂದಿಳಿದ್ದರಿಂದ ಅವರನ್ನು ಮೇಲಕ್ಕೇರಿಸಿದರು! ಸಡಗರವೋ ಸಡಗರ. ಚರಂಡಿ ವಾಸನೆ, ಸೊಳ್ಳೆ ಕಾಟ ಎಲ್ಲರನ್ನೂ ಕಾಡಿಸಿತು. ಸ್ಲಮ್ಮಿನವರು ಬುದ್ಧಿವಂತರು. ತಂಬಾಕು ಮೆಲ್ಲುತ್ತಾ ಕ್ಯಾಕರಿಸಿ ಉಗಿಯುತ್ತಿದ್ದರು. ಮಂತ್ರಿಗಳು ಯಥಾಪ್ರಕಾರ ಚರಂಡಿ ವಾಸನೆಯನ್ನು ಲೆಕ್ಕಿಸದೆ ಈ ವರ್ಷವೂ ತಮಗೇ ಓಟು ಹಾಕುವಂತೆ ಕೇಳಿಕೊಂಡರು. ಮಂತ್ರಿಗಳ ಭಾಷಣ ಮುಗಿಯಿತು ಎಂದು ಕಾರ್ಯದರ್ಶಿ ಘೋಷಿಸಿದ ನನ್ನ ಕಡೆ ತಿರುಗಿ '' ಈಗ ರಾಯರು ಪಕ್ಕದಲ್ಲಿ ಹಾಕಿರೋ ಏಣಿ ಹತ್ತಿ ಆ್ಯಂಟಿನ ರಿಪೇರಿಮಾಡಿ ನಮಗೆಲ್ಲ ಟಿ.ವಿ. ಭಾಗ್ಯ ಕರುಣಿಸ್ತಾರೆ, ರಾಯರಿಗೆ ದೊಡ್ಡ ಕೈ ಕೊಡಿ'' ಎಂದು ಗಟ್ಟಿಯಾಗಿ ಹೇಳಿದ. ಇದನ್ನು ಕೇಳಿದಾಗ ನನಗೆ ಆಶ್ಚರ್ಯವೂ, ಖೇದವೂ ಆಯ್ತು, ಆದರೂ ಭಾಷಣ ಇಲ್ಲ ಎಂದ ಮೇಲೆ ಮನಸ್ಸು ಹಗುರವಾಯ್ತು! ರಿಪೇರಿ, ಗೊತ್ತಿರೋ ಕೆಲ್ಸ ತಾನೆ! ಕಾಯಕವೇ ಕೈಲಾಸ ಎಂದುಕೊಂಡು ಕಾರ್ಯದರ್ಶಿ ಸೂಚನೆ ಕೊಟ್ಟಂತೆ ಏಣಿ ಮೆಟ್ಟಲು ಹತ್ತಿ ಕಮ್ಯೂನಿಟಿ ಹಾಲ್ ಮೇಲಿರುವ ತಾರ್ಸಿ ತಲುಪಿದೆ. ''ಸಿರಿಗನ್ನಡಂಗೆಲ್ಗೆ'' ಎಂದು ಕೂಗಿದ ಕಾರ್ಯದರ್ಶಿ. ಆ್ಯಂಟಿನ ಕೈಗೆ ಸಿಗ್ತು. ಕಾರ್ಯದರ್ಶಿ ''ಕಟಿಂಗ್‌ಪ್ಲೇಯರ್ ತಂದಿದೀರ ಸಾರ್'' ಎಂದ! ಅದು ಯಾವಾಗ್ಲೂ ನನ್ನ ಕೋಟಿನ ಜೇಬಲ್ಲೇ ಇರುತ್ತೆ! ನಾನು ಕಟಿಂಗ್ ಪ್ಲೇಯರ್ ತಗೊಂಡು ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ಕಳಚಿಕೊಂಡು ಬಿದ್ದಿದ್ದ ವೈರುಗಳನ್ನೆಲ್ಲ ಸೇರಿಸಿ ಕನೆಕ್ಷನ್ ಸರಿಪಡಿಸಿದೆ! ಕುಗ್ಗದೆ, ಜಗ್ಗದೆ, ಕರ್ನಾಟಕ ಹೃದಯಶಿವನನ್ನು ನೆನೆಯುತ್ತ ಕೆಳಕ್ಕಿಳಿದು ಬಂದೆ. ಕಾರ್ಯದರ್ಶಿ ಕನ್ನಡದ ಡಿಂಡಿಮವನ್ನು ಬಾರಿಸುತ್ತಿದ್ದ! ಸತ್ತು ಬಿದ್ದಿದ್ದ ಟಿ.ವಿ. ಜೀವ ಬಂದಂತೆ ಕೆಟ್ಟ ಕಟ್ಟ

ಶಬ್ದಗಳನ್ನು ಹೊರ ಸೂಸಲು ಪ್ರಾರಂಭಿಸಿತು. ಗೆರೆಗೆರೆ ಚಿತ್ರಗಳೂ ಕಾಣಿಸಿಕೊಂಡರು. ಕಿವಿ ನುಲುಚಿ, ನಾಲಿಗೆ ಎಳೆದು, ಎದೆ ಗುಂಡಿ ಒತ್ತಿದ ಮೇಲೆ ಹೆಣ್ಣು ರಾಗ ಹೊರಟಿತು! ಅದೃಷ್ಟಕ್ಕೆ ಕನ್ನಡ ಸಿನಿಮಾ ಹಾಡೇ ಬರಬೇಕೆ? ನಾನು ಸಮಯಸ್ಫೂರ್ತಿಯಿಂದ 'ಜೈ ಕರ್ನಾಟಕ ಮಾತೆ' ಎಂದು ಕೂಗಿದೆ ಎಲ್ಲರೂ ಜೈಕಾರ ಮಾಡಿದರು. ಅಲ್ಲೇ ಕೂತಿದ್ದ ಒಬ್ಬ ಗುಂಟೂರು ಕಡೆಯವನಿರಬೇಕು, ಎಲೆಯಡಿಕೆ ಜಗಿಯುತ್ತ ''ಬಾಗ ರಿಪೇರಿ ಚೇಸ್ತಾಡು ಈ ಕಂನಡು ಮುಂಡಾ ಕೊಡಕು'' ಎನ್ನುತ್ತಾ ತಾರೀಫ್ ಮಾಡಿದ್ದು ನನಗೆ ಕೇಳಿಸಿತು. ಕಾರ್ಯದರ್ಶಿ ಹಿಗ್ಗುತ್ತ ನನಗೆ ಹಾರ ಹಾಕಿದ. ಎಲ್ಲರೂ ಚಪ್ಪಾಳೆ ಹೊಡೆದು ಟಿ.ವಿ. ನೋಡೋಕೆ ಎದ್ದು ಹೋದರು. ಮಂತ್ರಿಗಳು ಡಿಲ್ಲಿ ವೈರಸ್‌ಗೆ ಹೆದರಿ ಮೊದಲೇ ಹೊರಟುಹೋಗಿದ್ದರು. ಕಾರ್ಯದರ್ಶಿ ನನ್ನನ್ನು ಬೀಳ್ಕೊಡೋಕೆ ರಸ್ತೆ ಕೊನೆವರಿಗೂ ಬಂದ. ನನಗೆ ತಡೆಯಲಾಗಲ್ಲಿಲ. ಅವನಿಗೆ ಒಂದು ಪ್ರಶ್ನೆ ಹಾಕಿದೆ. ''ಈಗಲಾದ್ರು ಹೇಳು, ನನ್ನ ಚೀಫ್ ಗೆಸ್ಟ್ ಆಗಿ ಕರೆದದ್ದು ಯಾಕೆ'' ಅಂತ!

ಅದಕ್ಕೆ ಆವನು ''ಸಾರ್, ನಾವು ಮೂರು ದಿವ್ಸ ಬಡಾವಣೇಲಿ ಸುತ್ತಾಡಿದ್ರೂ ಯಾರೂ ನಮಗೆ ಸರಿ ಎನಿಸಿದವರು ಸಿಕ್ಲಿಲ್ಲ. ನಿಮ್ಮ ಮನೆ ಮುಂದೆ ಎರಡು ದಿವ್ಸ ಠಳಾಯಿಸಿದೆವು. ನೀವು ಟಿ.ವಿ. ಫ್ಯಾಕ್ಟರಿಯಲ್ಲಿ ಕೆಲಸ ಮಾಡ್ತೀರ ಅನ್ನೋದು ಗೊತ್ತಾಯ್ತು. ಮನೆ ಮುಂದೆ ಭಾರಿ ಏಣಿ ನಿಲ್ಲಿರೋದನ್ನು ನೋಡಿದ್ವಿ. ನೀವು ಆ ಏಣಿ ಮೇಲೆ ಸಲೀಸಾಗಿ ಹತ್ತಿ ತಾರ್ಸಿ ಮೇಲಿರೋ ನಿಮ್ಮ ಮನೆ ಆ್ಯಂಟಿನವನ್ನು ಕಟಿಂಗ್‌ಪ್ಲೇಯರ್ ಇಂದ ರಿಪೇರಿ ಮಾಡ್ತಾ ಇದ್ದಿದ್ದು 'ಸಿಂಪ್ಲಿ ಫೈಂಟಾಸ್ಟಿಕ್' ಆಗಿತ್ತು ಸಾರ್! ನೀವೇ ನಮಗೆ ಸರಿಯಾದ ಗೆಸ್ಟು ಅಂತ ತೀರ್ಮಾನ ಮಾಡಿಬಿಟ್ಟು ಸಾರ್'' ಎಂದ!

ಹಾರ ಹಣ್ಣು ಎಲ್ಲ ತಂದುಕೊಟ್ಟ ''ಜೈ ಕರ್ನಾಟಕ ಮಾತೆ'' ಎಂದೆ. ಮನೆಗೆ ಬಂದ ತಕ್ಷಣ ''ಏಣೀನ ಪಕ್ಕದಲ್ಲಿ ಯಲ್ಲಾದ್ರೂ ಮಲಗಿಸಿರೋ'' ಎಂದು ಹೇಳಿದೆ, ಮನೆಯವರನ್ನು ಕರೆದು!

''ಏಣೀನ ಮಲಗಿಸಬಾರದ್ರಿ, ನೀವಿನ್ನೂ ಗಟ್ಟಿಮುಟ್ಟಾಗಿದೀರಲ್ಲ, ಅಶುಭ'' ಎಂದಳು ಹೆಂಡತಿ.

ಅಂದ ಹಾಗೆ ನನಗೂ ಎಂದಾದ್ರು ಪ್ರಶಸ್ತಿ ಸಿಗಬಹುದು ಅಲ್ವೆ?



# ಪಿಂಡೋಪಾಖ್ಯಾನ

**ಕೃಷ್ಣ ಸುಬ್ಬರಾವ್**

ನಾನು ಓದಿದವ. ನನಗೂ ಸ್ವಲ್ಪ ಪ್ರಪಂಚ ಜ್ಞಾನವೂ ಇದೆ. ಯಾರಾದರೂ ಏನಾದರೂ ತಿಳಿಸಿದರೆ ಅದನ್ನು ತಿಳಿದುಕೊಳ್ಳುವಷ್ಟು ಗ್ರಾಸ್‌ಪಿಂಗ್ ಪವರ್ ಇದೆ. ಬುದ್ಧಿವಂತ ವರ್ಗಕ್ಕೆ ಸೇರುವ ಅಧಿಕಾರವಿದೆ ಎಂದು ಸಹಜವಾಗಿ ನಂಬಿರುವ ನನಗೆ ಪ್ರತಿವರ್ಷ ನಮ್ಮಪ್ಪನ ಶ್ರಾದ್ಧವಾದಾಗ ಭ್ರಮನಿರಸನವಾಗುತ್ತದೆ. ನಾನು ತೀರ ದಡ್ಡ, ನನಗೇನು ಗೊತ್ತಿಲ್ಲ ಎಂದು ನನಗೆ ತಿಥಿ ಮಾಡಿಸುವ ವೈದಿಕರು ತಿಳಿಯಪಡಿಸುತ್ತಾರೆ. ಇದು ಹೇಗೆ ಅಂದ್ರೆ ನೀವು ಯಾವುದಾದರೂ ಸರ್ಕಾರಿ ಕೆಲ್ಸ ಮಾಡಿಸಿಕೊಳ್ಳಲು ಹೋದಾಗ ಡವಾಲು ಹಾಕಿರುವ ಜವಾನನಿಂದ ಹಿಡಿದು ಅಧಿಕಾರಿಗಳ ತನಕ ನಿಮ್ಮನ್ನು ''ಇಷ್ಟೂ ತಿಳಿಯುವುದಿಲ್ಲವೆ ನಿಮಗೆ?'' ಎಂದು ಹೀಯಾಳಿಸುವ ಜನರ ತರಹ. ಸರ್ಕಾರಿ ಕೆಲ್ಸದವರ ತರಹ ನೀವು ಬೈಗಳನ್ನು ತಿನ್ನುತಿರಲೆ ಬೇಕು ಅಥವಾ ವ್ಯಂಗದ ಮಾತನ್ನು ಎದುರಿಸಬೇಕು.

'ಪಿಂಡಪುರಾಣ' ಹಬ್ಬದ ಸಂಚಿಕೆಯಲ್ಲಿ ಪ್ರಕಟಿಸುವ ಸಂಪಾದಕರಿಗೂ ಬುದ್ಧಿಯಿಲ್ಲ ಎನ್ನಲೂಬಹುದು ಅಥವಾ ಪ್ರಕಟವಾದ ಈ ಲೇಖನದ ಪೇಜಿಗೆ ಶಂಖ ತೀರ್ಥ ಎಸೆದು ಪುಟಗಳನ್ನು ಮೈಲಿಗೆಯಿಂದ ಸಂರಕ್ಷಿಸಲೂಬಹುದು. ಇದು ನಿಮ್ಮ ಹಾಗು ನಿಮ್ಮ ಸಂಪಾದಕರ ಹಣೆಬರಹ. ನನಗ್ಯಾಕೆ? ನನ್ನ ಪುರಾಣ ನನಗೆ. ಪ್ರಕಟವಾದರೆ ಓದುತ್ತೀರಾ. ಇಲ್ಲದಿದ್ದರೆ ನಾನು ಪಿಂಡಕ್ಕೆ ಬಿಡುವ ಹಾಗೆ ಈ ಲೇಖನಕ್ಕೂ ತರ್ಪಣ...... .

ಮನೆಯಲ್ಲಿ 'ಪಿಂಡ' ಅನ್ನುವ ಪದ ನಿಷಿದ್ಧ. 'ವಡೆ' ಎನ್ನುವ ಶಬ್ದದ ತರಹ. ನಮ್ಮ ತಂದೆಗೆ ಮನೆಯಲ್ಲಿ ವಡೆ ಮಾಡಿಸಿ ತಿನ್ನುವ ಚಪಲ. ನಮ್ಮಮ್ಮ ಹಾಗೆ ಮಾಡಿದರೂ ಅದಕ್ಕೆ 'ಬೋಂಡ' ಅನ್ನಬೇಕು ಹಾಗೂ 'ತೂತು' ಮಾಡುವ ಹಾಗಿಲ್ಲ. 'ವಡೆ' ಕರಿಯಬಹುದು ಆದರೆ ಅದನ್ನು ಹಾಗೆ ಕರೆಯಬಾರದು. ಮನುಷ್ಯ ಸಾವಿಗೂ ಅಷ್ಟು ಹೆದರುವುದಿಲ್ಲ. ಆದರೆ ಪಿಂಡ, ವಡೆ ..... ಇತ್ಯಾದಿ ಶಬ್ದಗಳಿಗೆ ಬಹಳ ಹೆದರುತ್ತಾನೆ.

ನಿಮಗೇನ್ರಿ ಬಂತು? ಬರೆಯೋದಕ್ಕೆ ಬೇರೆ ಟಾಪಿಕ್ 'ಪಿಕ್' ಮಾಡಕ್ಕೆ ಬರೊಲ್ಲವೆ? ಅಂತ ಶ್ರೀಮತಿಯಿಂದ ಬೈಗುಳ ತಿಂದೇ ನಾನು ಇದನ್ನು ಬರೆಯೋದಕ್ಕೆ ಶುರು ಮಾಡಿದ್ದು.

ಶಾದ್ಧ ಮಾಡುವಾಗ ಅನೇಕ ಸ್ವಾರಸ್ಯ ಘಟನೆಗಳನ್ನು ವಿವರಿಸಿ ಅದನ್ನು

ದಾಖಲಿಸುವುದೇ ಉದ್ದೇಶ.

ನಮ್ಮ ತಂದೆ-ಶ್ರಾದ್ಧವನ್ನು ಸುಮಾರು ಇಪ್ಪತ್ತೈದು ವರ್ಷದಿಂದ ಮಾಡ್ತಾ ಇದ್ದೀನಿ. ಮೊದಲು ಮನೇಲಿ ಮಾಡುತ್ತಿದ್ದು ಈಗ ಮಠದಲ್ಲಿ ಮಾಡುತ್ತಿದ್ದೀನಿ. ಕಾರಣ ಕಾವೇರಿ - ಅಂದ್ರೆ ನೀರು ಅಮ್ಮನ ಪ್ರಕಾರ 'ಹಿಡಿದಿಟ್ಟ ನೀರು' ಮಡಿಗೆ ಬರೊಲ್ಲ. ಮಠದಲ್ಲೂ ಹಿಡಿದಿಟ್ಟ ನೀರು ಎಂದು ನಾನು ತೆಗೆದರೆ ಹಿಡಿದಿಟ್ಟವರು ಶುದ್ಧ - ನೀನು ಶುದ್ಧ ಮುಟ್ಠಾಳ ಅಂತಾರೆ. ನಾನು ಈ ವಿಷಯದಲ್ಲಿ ಅಮ್ಮನ ಜೊತೆ ವಾದ ಮಾಡೊಲ್ಲ. ಹೀಗಾಗಿ ನನ್ನಿಂದ ಪಿಂಡ ಪ್ರದಾನ ಮಾಡಿಸುವ ವೈದಿಕರ ವೈವಿಧ್ಯತೆ ನನ್ನನ್ನು ಬೆರಗುಗೊಳಿಸುತ್ತದೆ. ಈಚೀಚೆಗೆ ಶ್ರಾದ್ಧವೆಂದರೇನು? ಅದೇಕೆ ಮಾಡಬೇಕು? ಎಂದು ದೊಡ್ಡ ಕ್ಲಾಸ್ ತೆಗೆದುಕೊಳ್ಳುವ ಸಂಖ್ಯೆ ಜಾಸ್ತಿ. ಪ್ರತಿವರ್ಷ ಇದರ ಬಗ್ಗೆ ಕೇಳಿದ್ದೇನೆ. ನೀವೆ ಹೇಳಿದ್ದೀರಿ ಎಂದು ಹೇಳಿದರೆ ಅವರಿಗೆ ಕೋಪ ಬರುವುದೆಂದು ನಾನು ಪ್ರತಿ ಸಾರಿ ಕೇಳಿದ್ದೆ. ಕೇಳುತ್ತ ತಲೆ ಅಲ್ಲಾಡಿಸುತ್ತಾ ಬರುತ್ತಿದ್ದೇನೆ. ಇಲ್ಲದಿದ್ದರೆ ಶ್ರಾದ್ಧದ ಉದ್ದಕ್ಕೂ ಬೈಯಿಸಿಕೊಳ್ಳಬೇಕು.

ಸ್ವಭಾವತಃ ನಾನು ಆತುರದವ. ಯಾರಾದರೂ ಮಾತನಾಡುವುದಕ್ಕೆ ಮುಂಚೆಯೇ ಅವರೇನು ಹೇಳುತ್ತಾರೆ ಎಂದು ಊಹಿಸಿ ರಿಯಾಕ್ಟ್ ಮಾಡುವ ನಾನು ಶ್ರಾದ್ಧ ಮಾಡುವಾಗ Maintain ಮಾಡುವ ಕೂಲ್ ನನ್ನ ಹೆಂಡತಿಗೆ ಆಶ್ಚರ್ಯ. ದಿನವೂ ಹೀಗೆ ಇರಬಾರದೆ ಎನ್ನುತ್ತಾಳೆ. ''ವಡೆ ಹಾಗಂದರೆ ಪ್ರತಿದಿನ ತಿಥಿ....'' ಎಂದ್ರೆ ''ಹಾಗಲ್ಲರಿ ನೀವು ಪ್ರತಿನಿತ್ಯ ಹೀಗೆ ಶಾಂತವಾಗಿರಬಾರದೆ'' ಅಂತಾಳೆ.

''ಶ್ರಾದ್ಧ ಅಂದ್ರೆ ದುಡ್ಡು ಬಿಸಾಕೋದು ಕಾಟಾಚಾರಕ್ಕೆ ಮಾಡ್ತಾರೆ, ಮನೆಯಿಂದ ಒಂದು ಉದ್ಧರಣೆ, ತಟ್ಟೆ, ಗೋಪಿಚೆನ್ನ ತರೊಲ್ಲ. ಬಂದು ಕುಳಿತುಕೊಂಡು ಬಿಡ್ತಾರೆ. ದುಡ್ಡು ಕೊಟ್ಟುಬಿಟ್ಟರೆ ಸಾಕು ಅಂತ. ಅಲ್ನೋಡಿ ಆ ಮುದುಕರು ಎಷ್ಟು ಶ್ರದ್ಧೆಯಿಂದ ತುಳಸಿದಳನೂ ತಂದಿದ್ದಾರೆ. ಅವರಿಗೊಬ್ಬರಿಗಲ್ಲ, ಇಡೀ ಮಠಕ್ಕೆ ತಂದಿದ್ದಾರೆ. ಈ ಕಾಲದವರಿಗೆ ಆ ಬುದ್ಧಿ.....'' ಅಂತ ಹೋದ ಸಾರಿ ವೈದಿಕರು ಹೇಳಿದಾಗ ಅವರು ಜನರಲ್ ಆಗಿ ಹೇಳ್ತಾ ಇದ್ದಾರೆ ಅಂತ ಸುಮ್ಮನಾದೆ. ಏಕೆಂದರೆ ನಾನೂ ಕೈ ಬೀಸಿಕೊಂಡೆ ಹೋಗಿದ್ದೆ.

ಶ್ರಾದ್ಧ ಮಾಡಿಸುವಲ್ಲಿ ಅವರು ಅಥಾರಿಟಿ, ಬ್ಯಾಂಕಿನಲ್ಲಿ ನಾನು ಮ್ಯಾನೇಜರ್ ಅಂತ ನನ್ನ ಸ್ಟೇಟಸ್ ದೂರವಿಟ್ರು. ಅವರು ಯಾವಾಗಲೂ ರೈಟ್' ಅನ್ನುವ ತಿಳುವಳಿಕೆ ನನಗೆ. ಒಮ್ಮೊಮ್ಮೆ ನನಗೂ ರೇಗುತ್ತೆ. ಮಧ್ಯದಲ್ಲಿ ಎದ್ದುಹೋಗಿ ಅಂದ್ರೆ ಎಂಬ ಅಳುಕು. ನಮ್ಮಪ್ಪನಿಗೂ ನನ್ನಷ್ಟೆ ಶ್ರದ್ಧೆ! ಆದರೆ ಅಮ್ಮನಿಗೆ ಹಾಗೂ ಅಮ್ಮನಿಗೋಸ್ಕರ ನನಗೆ ಭಯ.

ಹೀಗೆ ಯೋಚನೆ ಮಾಡುತ್ತಿದ್ದಾಗ ಅರ್ಚಕರು 'ಸವ್ಯ' ಅಂದಾಗ ನಾವು ರೆಡಿಯಾಗಿದ್ದಾಗ ತಬ್ಬಿಬ್ಬಾಯಿತು. ನಾರ್ಮಲ್ ಆಗಿ ಜನಿವಾರ ಸವ್ಯದಲ್ಲೆ ಇರುತ್ತದೆ ಎಂಬ ತಿಳುವಳಿಕೆ ಇದ್ದರೂ ವೈದಿಕರ ಆದೇಶ ಬಂದಾಗ ಜನಿವಾರದ ದಿಕ್ಕನ್ನು ಬದಲಾಯಿಸಲು ಹೋದಾಗ ಸವ್ಯ ಅಪಸವ್ಯ ಗೊತ್ತಿಲ್ಲವೆ? ಎನ್ನುವ ಹಾಗೆ

ನೋಡಿದರು. ತಕ್ಷಣ ಸ್ವಸ್ಥಾನಕ್ಕೆ ಜನಿವಾರ ಜರುಗಿಸಿದೆ. ನಮ್ಮಪ್ಪ ಹೇಳಿಕೊಟ್ಟಿದ್ದರು ಅಕ್ಕಿ ಬಂದಾಗೆಲ್ಲ ಸವ್ಯ, ಎಳ್ಳು ಬಂದಾಗೆಲ್ಲಾ ಅಪಸವ್ಯ. ಒಮ್ಮೊಮ್ಮೆ ಮಾಡಿಸುವವರೇ ತಪ್ಪು ನಿರ್ದೇಶನ ಮಾಡಿದರೂ ನಮ್ಮದೇ ತಪ್ಪು.

ಈಗ ಹತ್ತು ವರ್ಷದಿಂದ ನನ್ನೊಡನೆ ತಪ್ಪದೇ ಮಠಕ್ಕೆ ಬರುವ ಒಬ್ಬ ಫ್ಯಾಕ್ಟರಿ ಉದ್ಯೋಗಿ ನನಗೆ ಶ್ರಾದ್ಧದ ಸ್ನೇಹಿತ. ಅವರಪ್ಪ ನಮ್ಮಪ್ಪ ಒಂದೇ ದಿನ ಸತ್ತಿದ್ದು ಪ್ರತಿವರ್ಷ ಅವನು ಸಿಕ್ಕೇ ಸಿಕ್ತಾನೆ. ಅವನಿಗೆ ಸೈರನ್ ಅಭ್ಯಾಸ. ಅವನ ಪರಫಾರೆನ್ಸ್ ನೋಡಿದರೆ ನಾನೇ ವಾಸಿ. ಅವನು ಚಿಕ್ಕ ಹುಡುಗನ ತರಹ ಬೈಯಿಸಿಕೊಳ್ಳುತ್ತಿರುತ್ತಾನೆ. ಶ್ರಾದ್ಧವಾದ ಮೇಲೆ ಹಸುವಿನ ಬರುವಿಗಾಗಿ ಕಾಯುತ್ತಿದ್ದಾಗ, ಓಡಿಬಂದ ಮಗು (ತನ್ನದೆ) ಕೈಗೆ ಬೀಳಬಹುದೆಂದು ಅದನ್ನು ಎತ್ತಿಕೊಂಡು, ಮೈಲಿಗೆ ಮಾಡಿಕೊಂಡು ನಿಂತಿದ್ದ. ವಿಚಾರ ತಿಳಿದಾಗ ಮತ್ತೆ ಸ್ನಾನ ಮಾಡಬೇಕೆಂದು ಆದೇಶ ಪಡೆದ. ಪಿಂಡ ಇಟ್ಟರೆ ಶ್ರಾದ್ಧ ಮುಗಿಯಿತು ಎಂದು ಹೊರಟಿದ್ದ ಅವನಿಗೆ ಮಡಿ ಎಲ್ಲಿಯವರೆಗೆ ಎಂದು ಅಂದು ಜ್ಞಾನೋದಯವಾಯ್ತು.

ಹಸು ಅಂದ್ರೆ ಮಠದ ಅರೇಂಜ್‌ಮೆಂಟ್ ಹೇಳಲೇಬೇಕು. ಒಂದು ದಿನ ಪಿಂಡಗಳ ಸಂಖ್ಯೆ ಅಪಾರವಾಗಿತ್ತು. ಅಂದ್ರೆ ತಿಥಿ ಮಾಡುವಾಗ ಸಂಖ್ಯೆ 15 ಜನ ಅಂದ್ರೆ 15X3 45 ಪಿಂಡವಿತ್ತು. ಒಂದೇ ಹಸು ತಿನ್ನುವುದಕ್ಕೆ ಸಾಧ್ಯವೆ? ಅದಕ್ಕೆ ಅರ್ಧ ಜನದ ಕೋಟ (Quota) ಮುಗಿದು ಇನ್ನರ್ಧ ಜನ ಇನ್ನೇನು ಮಾಡುವುದು ಎಂದು ಯೋಚಿಸುತ್ತಿದ್ದರು. ಆಗ ಮಠದ ವ್ಯವಸ್ಥಾಪಕರು ''ಇನ್ನೊಂದು ಹಸು ಬರುತ್ತೆ ಫೋನ್ ಮಾಡಿದ್ದೀವಿ'' ಅಂದರು. ''ಬೆಂಗಳೂರು ಮದರ್ ಡೈರಿಗಾ?'' ಎಂದು ಹೇಳಬೇಕೆಂದು ಕೊಂಡೆ. ಹಾಗೆ ಕೇಳಲಿಲ್ಲ. ನಂತರ ಗೊತ್ತಾಯಿತು ಹಸು ಸಾಕಿದವರ ಮನೇಲಿ ಫೋನ್ ಇದೆ ಅಂತ.

ಕಾಗೆಗೆ ಚಿಕ್ಕ ಪಿಂಡ ಇಡಬೇಕು. ಅದನ್ನು ಏಣಿ ಹತ್ತಿ ಛಾವಣಿ ಮೇಲೆ ಇಡುವ ಸಾಹಸ. ಅಷ್ಟು ವೇಳೆಗಾಗಲೇ ಹಸಿವಾಗಿ ಉಟ್ಟ ಪಂಚೆಯ ಗಂಟು ಸಡಿಲವಾಗಿರುತ್ತೆ. ಒಂದು ಕೈಯಲ್ಲಿ ಸಣ್ಣ ಪಿಂಡ ಇನ್ನೊಂದು ಕೈಯಲ್ಲಿ 'ಏಣಿ'. ಪಂಚೆ ಬಿಚ್ಚಿಹೋದರೆ ಗತಿ? ಎನ್ನುವ ಭಯ ಎಷ್ಟು ಕಾಡುತ್ತೆ ಅಂದರೆ ಬಿಸಿಲಿಗೆ ಜ್ಞಾನ ತಪ್ಪಿದರೂ ಆಶ್ಚರ್ಯವಿಲ್ಲ. ಇದು ನನ್ನ ದೃಷ್ಟಿಯಲ್ಲಿ Tough Task. ಆ Taskಅನ್ನು Tuft ಇರುವವರೇ ವಹಿಸಿಕೊಂಡರೆ ಎಷ್ಟು ಚೆನ್ನ ಅನ್ನಿಸುತ್ತದೆ. ಎಷ್ಟೇ ಕಷ್ಟವಾದರೂ ಕೈಲಾಸಂ ಹೇಳುವ ಹಾಗೆ ನಮ್ಮ ಋಣನ ತೀರಿಸುವ ಈ ಆನ್ಯೂಲ್ ಇನ್‌ಸ್ಟಾಲ್‌ಮೆಂಟ್ ಪಿಂಡಾಸ್ ಬಗ್ಗೆ ದೂಸರಾ ಮಾತನಾಡಬಾರದು.

ನನಗೆ ಜ್ಞಾಪಕಶಕ್ತಿ ಕಮ್ಮಿ ಇರಬಹುದು ಅಂತಲೋ ಏನೋ ನಮ್ಮಪ್ಪ ನನಗೆ ಅವರಪ್ಪನ ಹೆಸರು (ಅಂದ್ರೆ ನಮ್ಮ ತಾತ) ಇಟ್ಟಿದ್ದಾರೆ. ನಮ್ಮಪ್ಪನಿಗೂ ಅವರಪ್ಪ ಹಾಗೆ ಮಾಡಿದ್ದಾರೆ. ಪಿಂಡ ಪ್ರಧಾನ ಮಾಡುವಾಗ ನನಗೆ ಪ್ರಾಬ್ಲಮ್ ಇಲ್ಲ. ಪಿತೃ-ಪಿತೃಪಿತಾಮಹ-ಪ್ರಪತಾಮಹ- ಎಂದಾಕ್ಷಣ ನಾನು ಸಲೀಸಾಗಿ ಸುಬ್ಬರಾವ್-ಕೃಷ್ಣರಾವ್-ಸುಬ್ಬರಾವ್ ಅಂದು ಬಿಡುತ್ತೇನೆ. ಆದರೆ ನನ್ನ ಜೊತೆ ತಿಥಿ ಮಾಡುವ ಆ ಫ್ಯಾಕ್ಟರಿ ಉದ್ಯೋಗಿ ಅವರ ತಂದೆ ಹೆಸರು ಹೇಳಿಬಿಡ್ತಾನೆ. ಕಷ್ಟಪಟ್ಟು

ತಾತನ ಹೆಸರು ಹೇಳ್ತಾನೆ. ಮುತ್ತಾತನ ಹೆಸರು ಹೇಳುವಾಗಲೆಲ್ಲಾ ಮುಗ್ಗರಿಸುತ್ತಾನೆ.

ಕಾಶಿಗೆ ಅಥವಾ ಗಯಾಗೆ ಹೋದಾಗ ನೆಂಟರಿಷ್ಟರಿಗೆಲ್ಲಾ ಸೇರಿ ಸಾಮೂಹಿಕ ಪಿಂಡ ಇಡಬಹುದು. ನನ್ನ ಜೊತೆ ನಮ್ಮ ಭಾವ ಬಂದಿದ್ದರು. ಅವರು ಕಾಶಿಲಿ ನಲ್ವತ್ತು ಪಿಂಡ ಇಟ್ಟು ದಾಖಲೆ ಸ್ಥಾಪಿಸಿದರು. ತಿಥಿ ಆದಮೇಲೆ ಕೇಳಿದೆ 'ಏನ್ರೀ ಇದು ಬದುಕಿದ್ದವರಿಗೂ ಇಟ್ಟುಬಿಟ್ರಾ?' ''ಇಲ್ಲ ನಮ್ಮ ಫ್ಯಾಮಿಲಿ ದೊಡ್ಡದು. ಇನ್‌ಫ್ಯಾಕ್ಟ್ ನನಗೆ ಜ್ಞಾಪಕ ಬಂದವರಿಗೆ ಮಾತ್ರ ಇಟ್ಟಿದ್ದೇನೆ'' ಎಂದರು. ನಮ್ಮ ಜೊತೆ ಶ್ರಾದ್ಧ ಮಾಡಿದ ಒಬ್ಬ ಡಾಕ್ಟರ್ ''ನನಗೆ ಅವಮಾನ ಆಗುತ್ತೆ. ನಾನು ಕೇವಲ ಆರು ಪಿಂಡ ಇಟ್ಟಿದ್ದೇನೆ'' ಅಂದ್ರು. ಅದಕ್ಕೆ ನಮ್ಮ ಭಾವ ಅಂದ್ರು ''ನೀವು ನಿಮ್ಮ ಪೇಶಂಟ್ಸ್‌ಗೆಲ್ಲಾ ಇಟ್ಟಿದ್ದರೆ ನನಗಿಂತ ಜಾಸ್ತಿ......'' ಅಂದಾಗ ಶ್ರಾದ್ಧದ ಸಮಾರಂಭದಲ್ಲೂ ನಗದೆ ಇರುವುದು ಅಸಾಧ್ಯವಾಯ್ತು.

ಗಯಾದಲ್ಲಿ ತಿಥಿ ಎನ್ನುವ ವಿಷಯ ಬಂದಾಗ ನನ್ನ ಕಸಿನ್‌ಗೆ ಆದ ಫಜೀತಿ ಹೇಳಲೇಬೇಕು. ನನ್ನ ಕಸಿನ್ ಕೆಲ್ಸದ ಮೇಲೆ ಗಯಾದ ಕಡೆ ಹೋಗಬೇಕಾಯಿತು. ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡಿದ್ದ ನನ್ನ ಕಸಿನ್ ಸಮಯ ಸ್ಫೂರ್ತಿಯಿಂದ 'ತಾಯಿ' ಶ್ರಾದ್ಧ ಮಾಡಿ ಊರಿಗೆ ಬಂದ ತಕ್ಷಣ ತನ್ನ ಕೆಲ್ಸವನ್ನು ಕೊಂಡಾಡಬಹುದೆಂಬ ನಂಬಿಕೆಯಿಂದ ತಂದೆ ಹತ್ತಿರ ತನ್ನ ಕಾರ್ಯ ಹೇಳಿದ.

''ಥೂ, ಬಡ್ಡಿಮಗನೆ ನಾನು ಬದುಕಿರುವಾಗ ನೀನು ಮಾಡಬಾರ್ದು ಪೆದ್ದುಮುಂಡೆದೆ'' ಎಂದು ಬೈದರಂತೆ.

ಹೀಗೆ ನಾವು ಒಳ್ಳೆ ಕೆಲ್ಸ ಮಾಡ್ತೀವಿ ಅಂತ ಅಂದ್ಕೊಂಡಿದ್ದರೆ ಅವರು ಬೈದರೆ ಎಷ್ಟು ಬೇಜಾರಾಗುತ್ತೆ. ಒಂದ್ಸಾರಿ ನಮ್ಮ ನೆಂಟರಿಷ್ಟರ ಮನೇಲಿ ಶ್ರಾದ್ಧ ಬಹಳ ಲೇಟಾಗಿತ್ತು. ಬಹಳ ಹಸಿದಿದ್ದ ಮಗು ದೂರದಲಿದ್ದ ಪಿಂಡ ನೋಡಿ ''ಅಮ್ಮ, ಆ ಒಗ್ಗರಣೆ ಅನ್ನ ಕೊಡು'' ಅಂತ ಜೋರಾಗಿ ಹಠ ಹಿಡಿಯಿತು. ಅಲ್ಲಿದ್ದವರೆಲ್ಲ ನಕ್ಕರೆ ಮಗುವಿನ ತಾಯಿ ಒಂದೇಟು ಹೊಡೆದು ಮಗುವನ್ನು ಹೊರಕ್ಕೆ ಎಳೆದುಕೊಂಡರು.

ದೆಹಲಿಯಲ್ಲಿ ಹಾಸ್ಟೆಲ್‌ನಲ್ಲಿ ಊಟಕ್ಕೆ ಎರಡು ಪಿಂಡ ಹಾಕ್ತಾ ಇದ್ದರು ಅಂತ ನನ್ನ ಕಸಿನ್ ಹೇಳಿದ್ದ. ವೀಕ್ ಎಂಡ್‌ಗೆ ಅವನು ಅಣ್ಣನ ಮನೆಗೆ ಹೋಗುವಾಗ ಅವನ ರೂಂಮೇಟ್‌ಗೆ ''ನನ್ನ ಪಿಂಡಾನೂ ನೀನೆ ಹಾಕಿಸಿಕೊ'' ಎಂದು ಆಥಾರೈಸ್ ಮಾಡಿ ಹೋಗಿದ್ದಾನಂತೆ. ಆ ಗೆಳೆಯ ಬಡಿಸುವವರಿಗೆ ''ಸಾರ್ ಇವತ್ತು ಮಾಧುವಿನ ಪಿಂಡವನ್ನೂ ನನಗೆ ಹಾಕಿ'' ಎನ್ನುತ್ತಿದ್ದನಂತೆ.

ಕ್ರಿಕೆಟ್‌ನಲ್ಲಿ ನಾವು ಕೆಳಗೆ ಉರುಳಿಸಿದ ಬಾಲಿಗೆ ಪಿಂಡ ಉರುಳಿಸುವುದು ಎಂಬ ಬೋಲಿಂಗ್ ಟೆಕ್ನಿಕ್ ಅಂದುಕೊಂಡಿದ್ದೆವು. ಅದನ್ನು ಕಪಿಲ್‌ದೇವ್ ಕೂಡ ಕಲಿಯದಿರುವುದು ಭಾರತದ ಒಂದು ದೊಡ್ಡ ದುರಂತ.

ಪಿಂಡ ಕಟ್ಟುವುದು ಒಂದು ಕಲೆ. ಪ್ರತಿವರ್ಷ ನಮ್ಮಪ್ಪ ಕಷ್ಟಪಡುತ್ತಿದ್ದಾಗ ನಾನು ಚಿಕ್ಕವಯಸ್ಸಿನಲ್ಲಿ ಹೇಳುತ್ತಿದ್ದೆನಂತೆ ''ಏನಪ್ಪ ಇಷ್ಟು ಕಷ್ಟ ಪಡ್ತಿ, ಅಜ್ಜಿನ ನೋಡಿ ಕಲಿ. ಅವರು ಕೈತುತ್ತು ಹಾಕುವಾಗ ಎಷ್ಟು ಚೆನ್ನಾಗಿ ಮಾಡ್ತಾರೆ, ಅದು ಒಡಿತಾನೆ ಇರ್ತಾ ಇರಲಿಲ್ಲ'' ಅಂತ. ತಿಥಿ ಮಾಡುವಾಗ ಬರದ ಅಜ್ಜಿ ಜ್ಞಾಪಕ ಆಗ ಬಂದು ಎಲ್ಲರ ಕಣ್ಣಿನಲ್ಲಿ ನೀರು ಮಿಂಚಿತಂತೆ. ನಮ್ಮಮ್ಮ ಈಗಲೂ ಜ್ಞಾಪಿಸುತ್ತಾರೆ.

ಏನೂ ಮಾಡದೆ ಸುಮ್ಮನೆ ಕುಳಿತರೆ ದಂಡಪಿಂಡ (ಡಿ.ಪಿ.) ಅನ್ನುತ್ತಾರೆ. ಪಿಂಡಕ್ಕಾದರೂ ಒಬ್ಬ ಪುತ್ರ ಬೇಕು ಎಂದು ಹೇಳುವುದು ಅಶುಭ ಅಂತ ಹೇಳಿ ಕೀರ್ತಿಗಾಗಿ ಒಬ್ಬ ಮಗ ಅಂತಾರೆ.

ಭೈರಪ್ಪನವರ ಕ್ರಾಂತಿಕಾರಿ ಆಲೋಚನೆಗಳಲ್ಲಿ ಹೆಣ್ಣುಮಗಳು ಅಪ್ಪನ ಶ್ರಾದ್ಧ ಮಾಡಿ ಎಲ್ಲಾ ಗಡಿಯನ್ನೂ ದಾಟುವಿನಲ್ಲಿ ದಾಟುತ್ತಾಳೆ. ಫ್ಯಾಮಿಲಿ ಪ್ಲಾನಿಂಗ್ ದೃಷ್ಟಿಯಲ್ಲಾದರೂ ಪಿಂಡಪ್ರಧಾನ ಯಾರು ಬೇಕಾದರೂ ಮಾಡಬಹುದಾದರೆ ಬ್ರಾಹ್ಮಣರ ಸಂಖ್ಯೆ ಹತೋಟಿಗೆ ಸಿಗಬಹುದು.

ಕ್ರಿಕೆಟ್ ಪಿಂಡಕ್ಕೂ ಶ್ರಾದ್ಧದ ಪಿಂಡಕ್ಕೂ ವ್ಯತ್ಯಾಸ ಹೇಳಿ ವಿರಮಿಸುತ್ತೇನೆ.

ಬೇರೆಯವರು ಔಟ್ ಆದಾಗ ನಾವು ಶ್ರದ್ಧೆಯಿಂದ ಪಿಂಡ ಉರುಳಿಸಿದರೆ ಕ್ರಿಕೆಟ್‌ನಲ್ಲಿ ಬೇರೆಯವರನ್ನು ಔಟ್ ಮಾಡುವುದಕ್ಕೋಸ್ಕರ ಪಿಂಡ ಉರುಳಿಸುತ್ತೇವೆ.

ಇಲ್ಲಿಗೆ ಮುಗಿದಿದೆ ಪಿಂಡೋಪಾಖ್ಯಾನ.

★★★



''ಹವಾಲಾದಿಂದ ಬೆಚ್ಚಗಿದೆ ಈ ದೇಶ. ಇನ್ಮೇಲೆ ಇಲ್ಲಿಗೇ ಬರೋಣ''

# ಯಾರಾದರೂ ಕಂಡುಹಿಡಿಯ ಬಾರದೇ?

ಆರತಿ

ಆಧುನಿಕ ಜಗತ್ತಿನಲ್ಲಿ ಜೀವನ ದುಸ್ತರ. ಹೊಸ ಉಪಕರಣಗಳ ಸಂಶೋಧನೆ ಸುಲಲಿತ ಜೀವನಕ್ಕೆ ಅತ್ಯಗತ್ಯ. ಈ ನಿಟ್ಟಿನಲ್ಲಿ ನಮ್ಮ ಕಾಣಿಕೆ ನಿಮ್ಮ ಮುಂದೆ ಇಟ್ಟಿದೆ. ಈ ಉಪಕರಣಗಳನ್ನು ನಿರ್ಮಿಸಿ, ಜಗತ್ತಿನ ಕೃತಜ್ಞತೆಗೆ ಪಾತ್ರರಾಗಿ.

**1. ಬಾಲ್‌ಪೆನ್ ಕ್ರಷರ್**



ನೀವು ಎಷ್ಟೇ ಬಾಲ್‌ಪೆನ್‌ಗಳನ್ನು ಕೊಂಡಿಟ್ಟುಕೊಂಡಿದ್ದರೂ ಬರೆಯಬೇಕು ಅಂತ ಒಂದು ಬಾಲ್‌ಪೆನ್ ತೆಗೆದುಕೊಂಡರೆ, ಅದರಲ್ಲಿನ ರೀಫಿಲ್ ಒಣಗಿ ಕೂತಿರುತ್ತದೆ. ಇಂತಹ ನೂರಾರು ಬಾಲ್‌ಪೆನ್‌ಗಳು ಸದಾ ಕೈಗೆ ಸಿಗುವುದನ್ನು ತಪ್ಪಿಸಲು ಈ ಸಾಧನ. ಒಮ್ಮೆ ಇದರಲ್ಲಿ ಬಾಲ್‌ಪೆನ್ ಹಾಕಿದರೆ ಮುಗಿಯಿತು. ಇನ್ನೊಮ್ಮೆ ಅದು ಈ ಜನ್ಮದಲ್ಲಿ ನಿಮಗೆ ಸಿಗುವುದಿಲ್ಲ.

**2. ಮ್ಯಾಗ್ನೆಟಿಕ್ ಬ್ಯಾಟ್ ಮತ್ತು ಬಾಲ್**




ಭಾರತದ ಕ್ರಿಕೆಟ್ ಟೀಂ ಈಡನ್ ಗಾರ್ಡನ್ನಿನಲ್ಲಿ ಅನುಭವಿಸಿದ ಬವಣೆಯನ್ನು ಎಂದೆಂದಿಗೂ ತಪ್ಪಿಸಲು ಈ ಅಪೂರ್ವವಾದ ಐಡಿಯಾ. Like poles repel ಎಂಬ ಭೌತಶಾಸ್ತ್ರದ ನಿಯಮವನ್ನು ಉಪಯೋಗಿಸಿ ಈ ಕ್ರಿಕೆಟ್‌ಬ್ಯಾಟ್ ಮತ್ತು ಬಾಲ್‌ಗಳನ್ನು ನಿರ್ಮಿಸಲಾಗಿದೆ. ಬಾಲ್, ಬ್ಯಾಟಿನ ಹತ್ತಿರ ಬಂದರೆ ಸರಿ, ಬ್ಯಾಟಿನ N pole ರಭಸದಿಂದ ಬಾಲನ್ನು ದೂಡಿ, ಬಾಲ್ ಬೌಂಡರಿಗೆ ದೌಡಾಯಿಸುತ್ತದೆ. ಸನತ್

ಜಯಸೂರಿಯ ಇನ್ನೊಮ್ಮೆ ನಮ್ಮೊಂದಿಗೆ ಸೆಣೆಸಲು ಬಂದರೆ ಅವನ ಔಡಿಯನ್ನು ಕಿತ್ತುಕೊಂಡು ಕಳಿಸಲು ಸಹಾಯಕವಾದ ಸಾಧನ, ಈ ಮ್ಯಾಗ್ನೆಟಿಕ್ ಬ್ಯಾಟ್ ಅಂಡ್ ಬಾಲ್.



### 3. ಆಟೋರಿಕ್ಷಾ ಲಿಫ್ಟರ್

ರಭಸದಿಂದ ಸಾಗುತ್ತಿರುವ ವಾಹನಗಳ ಮಧ್ಯೆ, ಹಾವಿನಂತೆ ಸರಿದಾಡಿ ಅಪಘಾತಗಳನ್ನುಂಟುಮಾಡುವ ಆಟೋರಿಕ್ಷಾಗಳನ್ನು ನೀವೆಲ್ಲಾ ನೋಡೇ ಇರುತ್ತೀರಿ. ಈ ಆಟೋ ಚಾಲಕರನ್ನು ಶಿಕ್ಷಿಸುವರೇ ಇಲ್ಲವೇ ಎಂದು ನೀವು ಅನೇಕ ಬಾರಿ ಹಲುಬಿರುವುದು ಸಾಧ್ಯ. ಧೃತಿಗೆಡಬೇಡಿ, ನಿಮ್ಮ ಸಹಾಯಕ್ಕೆ ಇಗೋ ಹೊಸ ಸಾಧನ. ಆಟೋರಿಕ್ಷಾ ಲಿಫ್ಟರ್ ವಾಹನಗಳ ಸಂಚಾರ ದಟ್ಟವಾಗಿರುವ ಬೀದಿಗಳಲ್ಲಿ ಈ ಸಾಧನಗಳನ್ನು ಸ್ಥಾಪಿಸಿದರೆ, ಇದರಲ್ಲಿನ ಕಂಪ್ಯೂಟರ್, ಹಾವಿನಂತೆ ಬೇಜವಬ್ದಾರಿಯಿಂದ ಸರಿದಾಡುತ್ತಿರುವ ಆಟೋ ರಿಕ್ಷಾವನ್ನು ಗುರುತಿಸಿ, ಅದನ್ನು ಅನಾಮತ್ತಾಗಿ ಮೇಲೆತ್ತಿಬಿಡುತ್ತದೆ. ಮೇಲಿನಿಂದ ಅವನು ''ತಪ್ಪಾಯ್ತು'' ಎಂದು ನೂರು ಸಲ ಕೂಗುವವರೆಗೂ ಆಟೋ ಮೇಲೇ ನೇತಾಡುತ್ತಿರುತ್ತದೆ.

ನಿಮ್ಮದೂ ಏನಾದರೂ ಘನಂದಾರವಾದ ಐಡಿಯಾ ಇದ್ದರೆ ತಿಳಿಸಿ. ಖಂಡಿತ ಪ್ರಕಟಿಸುತ್ತೇವೆ.

# ಪರದೇಶದಲ್ಲಿ ಒಂದು ರಾತ್ರಿ

-ನಂದಿನಿ ಕಾಪಡಿ

ಪಶ್ಚಿಮ ಯುರೋಪಿನ ಒಂದು ದೇಶ. ಚಳಿಗಾಲ - ರಾತ್ರಿ ಹೊತ್ತು. ಇನ್ನೂ ಹಿಮ ಬೀಳುತ್ತಿಲ್ಲವಾದರೂ, ಕೊರೆಯುವ ಚಳಿ. ಉಣ್ಣೆಯ ಓವರ್‌ಕೋಟ್ ಧರಿಸಿ, ತಲೆ ತುಂಬಾ ಟೋಪಿ ಧರಿಸಿದ ಆತ ಬೇಗ ಬೇಗ ನಡೆಯುತ್ತಾ ಪಬ್ಬಿನತ್ತ ಹೊರಟಿದ್ದ...

ಜಾಗ ಹುಡುಕುತ್ತಾ ಒಂದೇ ವ್ಯಕ್ತಿ ಕುಳಿತಿದ್ದ ಟೇಬಲ್ಲಿನ ಹತ್ತಿರ ಬಂದವನೇ ಇಂಗ್ಲೀಷಿನಲ್ಲಿ ''ಕ್ಷಮಿಸಿ, ನಾನಿಲ್ಲಿ ಕುಳಿತರೆ ಅಭ್ಯಂತರವಿಲ್ಲವಷ್ಟೇ'' ಎಂದ.

ಇಂಗ್ಲೀಷ್ ಬರದ ಈ ನಾಡಿನಲ್ಲಿ ಅಪ್ಪಟ ಕನ್ನಡಿಗರ ಶೈಲಿಯಲ್ಲಿ ಇಂಗ್ಲೀಷ್ ಮಾತನಾಡಿದ ಆ ವ್ಯಕ್ತಿಯನ್ನು ನೋಡಿದ ಎರಡನೆಯವನು ಆಶ್ಚರ್ಯಚಕಿತನಾದ. ಅರ್ಧಗಂಟೆಯಿಂದ ಒಂಟಿಯಾಗಿ ಕುಡಿದು ಬೇಸತ್ತಿದ್ದವನಿಗೆ ಮರುಭೂಮಿಯಲ್ಲಿ ಓಯಸಿಸ್ ಸಿಕ್ಕಂತಾಗಿ ''ಕುಳಿತುಕೊಳ್ಳಿ, ಅಂದಹಾಗೆ ನೀವು ಭಾರತೀಯರೆ?'' ಎಂದ.

''ಹೌದು, ನನ್ನ ಹೆಸರು ನಾರಾಯಣ ರಾವ್ ಬೆಂಗಳೂರಿನವನು. ಈ ಊರಿನಲ್ಲಿ ಹೆಚ್ಚಿನ ತರಬೇತಿಗೆಂದು ಬಂದಿದ್ದೇನೆ'' ಎಂದು ಮೊದಲನೆಯವ ಪರಿಚಯ ಹೇಳಿಕೊಂಡ.

ಎರಡನೆಯ ವ್ಯಕ್ತಿಯ ಮುಖದಲ್ಲಾದ ಬದಲಾವಣೆ ಪಬ್ಬಿನ ಆ ಮಂದಬೆಳಕಿನಲ್ಲೂ ವ್ಯಕ್ತವಾಯಿತು. ''ಅರೇ...ನಾಣೀಯಲ್ಲವೇನೋ? ನನ್ನ ಗುರುತು ಸಿಗಲಿಲ್ಲವೇ, ಸೀನಿ ಕಣೋ, ಶ್ರೀನಿವಾಸ ಅಯ್ಯಂಗಾರ್'' ಎಂದವನೇ ಎದ್ದುಬಂದು ಗೆಳೆಯನನ್ನು ತಬ್ಬಿಕೊಂಡ.

ಇಬ್ಬರು ಗೆಳೆಯರ ಮಿಲನ ಮೂವತ್ತೈದು ವರ್ಷಗಳ ನಂತರ. ನಾಣಿ ಮತ್ತು ಸೀನಿ ಇಬ್ಬರೂ ಬೆಂಗಳೂರಿನ ಒಂದೇ ಬಡಾವಣೆಯಲ್ಲಿ ಬಾಲ್ಯ ಕಳೆದವರು. ಇಬ್ಬರೂ ಚಡ್ಡಿ ಸ್ನೇಹಿತರು... ಸಿಹಿ ನೆನಪುಗಳ ಸುರಳಿ ಬಿಚ್ಚುತ್ತಾ ಹೋಯಿತು. ಇಬ್ಬರೂ ರಸ್ತೆಯಲ್ಲಿ ಸೈಕಲ್ ಚಕ್ರ ಓಡಿಸುತ್ತಾ ಬಿದ್ದು ಕಾಲು ತರೆಚಿಕೊಂಡು ತಾಯಿಯರ ಹತ್ತಿರ ಬೈಸಿಕೊಂಡಿದ್ದರು; ಲಗೋರಿ ಆಡುವ ನೆವದಲ್ಲಿ ತಮ್ಮ ಕಡುವೈರಿ ಸತ್ತಿಯನ್ನು ಥಳಿಸಿದ್ದದ್ದು; ಕ್ರಿಕೆಟ್ ಆಡುತ್ತಾ ಎದುರು ಮನೆಯ ಕಿಟಕಿ ಗಾಜನ್ನು ಒಡೆದು, ಆ ಮನೆಯಾಕೆಯ ಹತ್ತಿರ ಬೇಕಾಬಿಟ್ಟಿ ಅನ್ನಿಸಿಕೊಂಡದ್ದು...ಇನ್ನೂ ಸ್ವಲ್ಪ ದೊಡ್ಡವರಾದ ಮೇಲೆ ಗೆಳೆಯ ಅಶೋಕ್ ಸೇದಿ ಬಿಟ್ಟ ಸಿಗರೇಟ್ ತುಂಡನ್ನು ಸೇದಿದ್ದು... ಬೀದಿಗೆ ಹೊಸದಾಗಿ ಬಂದಿದ್ದ ಬಂಗಾಲಿ ಕುಟುಂಬದ ಏಕೈಕ ಪುತ್ರಿ ಮೋನಾಳನ್ನು ಒಟ್ಟಿಗೇ ಪ್ರೇಮಿಸಿ, ಅವಳು ಮದುವೆಯಾಗಿ ಹೋದಾಗ ಗಡ್ಡಬಿಟ್ಟು ದೇವದಾಸರಂತೆ ಬಾರಿಗೆ

ಹೋಗಿ, ಮೊದಲ ಬಾರಿ ಮದಿರೇ ಸೇವಿಸಿದ್ದು! ಒಂದೇ ಎರಡೇ ನೆನಪುಗಳು!

''ನೀನು ಕಾಲೇಜು ಅರ್ಧದಲ್ಲೇ ಬಿಟ್ಟು ಈ ಪರದೇಶಕ್ಕೆ ಓಡಿ ಬಂದೆ. ನಾನು ಅಲ್ಲೇ ಓದಿ, ಅಲ್ಲೇ ಫ್ಯಾಕ್ಟರಿಗೆ ಸೇರಿ, ಅಲ್ಲಿನಿಂದ ಇಲ್ಲಿಗೆ ಕಳಿಸಲ್ಪಟ್ಟೆ. ಇದಕ್ಕಲ್ಲವೇ ಆಕಸ್ಮಿಕ ಅನ್ನುವುದು! ಅಂದಹಾಗೆ ಸೀನಿ, ನೀನು ಇಲ್ಲೇ ಮದುವೆಯಾದೆ ಅಲ್ಲವೆ? ಹೆಂಡತಿ, ಮಕ್ಕಳೆಲ್ಲಿ?'' ನಾರಾಯಣನಿಗೆ ಕುತೂಹಲ.

''ಮದುವೆ ಮುರಿದು ವಿಚ್ಛೇದನದ ಸ್ಥಿತಿ ಬಂದಾಗಿದೆ. ಮಕ್ಕಳು ತಮ್ಮ ತಮ್ಮ ಹಾದಿ ಹಿಡಿದು ವರ್ಷಗಳಾದವು. ನಿನ್ನ ಕಥೆ?'' ಸೀನಿಯ ಉತ್ತರ.

''ನಮ್ಮದೇನಪ್ಪ, ಎಲ್ಲರಂತೆ ಮದುವೆ, ಮಕ್ಕಳು. ದೊಡ್ಡಮಗ ಚಾರ್ಟೆಡ್ ಅಕೌಂಟೆಂಟ್. ಎರಡನೆಯವನು ಬಿ.ಎಸ್ಸಿ. ಓದುತ್ತಿದ್ದಾನೆ. ಅದು ಸರಿ ಗುರೂ, ಬೆಂಗಳೂರಿಗೆ ಬಂದು ಎಷ್ಟು ವರ್ಷವಾಯಿತು?''

''ಅಲ್ಲಿ ಇರುವುದಾದರೂ ಏನು? ಅಪ್ಪ ಸತ್ತಿದ್ದು ತಮ್ಮ ರಾಘವನ ಹತ್ತಿರ ಅಮೇರಿಕಾದಲ್ಲಿ. ತಂಗಿ ಲಕ್ಷ್ಮೀ ಇಂಗ್ಲೆಂಡಿನಲ್ಲಿದ್ದಾಳೆ. ಅಮ್ಮನ ನೆನಪು ಇಲ್ಲದ ಹಾಗಾಗಿದೆ''.

''ಅದು ಸರಿ ಸೀನಿ.. ನಿಮ್ಮ ಅಯ್ಯಂಗಾರ್ ಬೇಕರಿ ಮುಚ್ಚೇ ಬಿಟ್ಟಿತಲ್ಲೋ? ಏನು ಭವ್ಯ ಬೇಕರೀಪ್ಪ ನಿಮ್ಮದು. ಬೇಕಾದವರಿಗೆ ಸಿಹಿ, ಖಾರದ ಬನ್ನು, ಬೇಡದವರಿಗೆ ಬರೀ ಬನ್ನು, ಕುಡಿಯುವವರಿಗೆ ಖಾರದ ಕಡಲೆಬೀಜ, ಹುರಿಗಾಳು, ಬಾಯಿ ಚಪಲದವರಿಗೆ ಖಾರದವಲಕ್ಕಿ ಆಮೇಲೆ ನಿಮ್ಮ ಶುದ್ಧ ಶಾಖಾಹಾರಿ ಕೇಕು ಮೇಲೆ ತೂಗುಹಾಕಿದ ವೆಂಕಟರಮಣ-ಪದ್ಮಾವತಿ ಪಟಕ್ಕೆ ಹೂವಿನ ಹಾರ ಹಾಕಿ ಊದು ಕಡ್ಡಿ ಹಚ್ಚುವವರೆಗೆ ನಿಮ್ಮಪ್ಪಾ ದಮ್ಮಯ್ಯ ಅಂದರೂ ಮಾರಾಟ ಮಾಡುತ್ತಿರಲಿಲ್ಲ! ನಿನ್ನ ತಮ್ಮ ರಾಘು - ನಿಮ್ಮಪ್ಪನ ಕಣ್ಣು ತಪ್ಪಿಸಿ ಒಂದು ದಿನ ಖಾರದ ಕಡಲೇ ಕಾಯಿ ನಮಗೆ ಕೊಟ್ಟಿದ್ದ... ಎರಡನೇ ದಿನ ನಾವುಗಳು ಅವನಿಗೆ ಓಸಿ ಹೊಡೆದು ಇನ್ನೊಂದು ಸಲ ಕೊಡು ಜಾಣ ಎನ್ನುತ್ತಿರುವಾಗಲೇ ನಿಮ್ಮಪ್ಪ ಬಂದು ನರಸಿಂಹಾವತಾರ ತಾಳಿದ್ದರು. ಅಂದಹಾಗೆ ಅವರ ಹೆಸರೂ ನರಸಿಂಹ ಅಯ್ಯಂಗಾರ್ ತಾನೆ'' ನಾಣಿಯ ನೆನಪಿನ ಸುರುಳಿ ಬಿಚ್ಚಿಕೊಳ್ಳುತ್ತಾ ಈ ಪರದೇಶದಲ್ಲಿ ಪೇಯದೊಂದಿಗೆ ತಿನ್ನಲು ಖಾರದ ಕಡಲೆ ಬೀಜ, ಮತ್ತು ರಾಜಾ ಮಸಾಲಾ ಇದ್ದಿದ್ದರೆ ಎನಿಸಿತು! ಅದನ್ನು ಹೇಳಿಯೂ ಬಿಟ್ಟ.

''ಥೂ ಈ ಸುಡುಗಾಡು ನಾಡಿನಲ್ಲಿ ಪೇಯವೂ ಒಂಟಿ ಕಣಮ್ಮ. ನಿಂಗೆ ಬೇಕಾದರೆ ಫ್ರೆಂಚ್‌ಫ್ರೈ ತರಿಸುತ್ತೇನೆ. ಅದನ್ನೇ ಆಲೂಗೆಡ್ಡೆ ಬೋಂಡಾ ಎಂದುಕೊಂಡು ಬಿಡು'' ಎನ್ನುತ್ತಾ ಸೀನಿ ಕೌಂಟರಿನ ಕಡೆಗೆ ನಡೆದ.

ಫ್ರೆಂಚ್‌ಫ್ರೈ ಅಂದುಕೊಂಡಷ್ಟು ಕೆಟ್ಟದಾಗಿರಲಿಲ್ಲ. ಇದ್ದರೂ ಏನೂ ಮಾಡುವ ಹಾಗಿರಲಿಲ್ಲ.

''ಅಂದಹಾಗೆ ಸೀನಿ ನಿಮ್ಮ ಮನೆ ಗೋಕುಲಾಷ್ಟಮಿ ಯಾವಾಗಲೂ ಜ್ಞಾಪಿಸಿಕೊಳ್ತೇನೆ ಕಣೋ. ನೂರೆಂಟು ಬಗೆ ತಿಂಡಿ ನಿಮ್ಮನೇಲಿ ಎಂದು ಗೊತ್ತಿದ್ದ

ನಾವೆಲ್ಲಾ ಅವತ್ತು ರಾತ್ರಿ, ನಿಮ್ಮ ಮನೆಗೆ ಧಾಳಿ ಇಡುತ್ತಿದ್ವಿ. ನಿಮ್ಮನೆ ಪುಳ್ಳಂಗಾಯಿ ಉಂಡೆ, ತೇಂಗೊಳಲು, ಕೈ ಮುರುಕ್ಕು ಇನ್ನೂ ಈಗ ತಿಂದ ಹಾಗಿದೆ'' ಎಂದ ನಾಣಿ ಮೆಲುಕು ಹಾಕುತ್ತಾ.

''ನಮ್ಮಜ್ಜಿಯಂತೂ ನಿನ್ನ ಹೊಟ್ಟೆಬಾಕತನ ನೋಡಿ 'ಈ ನಾಣಿ ಮುಂಡೇದಕ್ಕೆ ತೇಂಗೊಳಲು ತುಂಬಾ ದುರಾಸೆ!' ಅಂತಾ ಬಯ್ದುಕೊಳ್ಳುತ್ತಲೇ ನಿನ್ನ ತಟ್ಟೆ ತುಂಬಾ ತೇಂಗೊಳಲು ತುಂಬಿಸುತ್ತಿದ್ದರು... ಅದು ಸರಿ ಗುರೂ.. ನಿಮ್ಮ ಅಜ್ಜಿ ಮಾಡ್ತಿದ್ದ ಸ್ವಾಮಿಗೆ ಪಾಯಸಕ್ಕೆ ನಾನೂ ಹಾತೊರೆವಾಗ ನೀನು ತೇಂಗೊಳಲು ಕೊಟ್ಟರೆ ಮಾತ್ರ ಪಾಯಸ ಎಂದು ಕಂಡೀಷನ್ ಹಾಕಿದ್ದು ಮರತೇ ಹೋಯಿತೇನೋ?'' ಎಂದ ಶ್ರೀನಿವಾಸ.

''ಪಾಪ ನಮ್ಮಜ್ಜಿ ಮೊದಲು ನಿಮ್ಮ ಬೇಕರಿಗೆ ಶಾಪ ಹಾಕುತ್ತಿದ್ದರು. ಹೆಸರಿಗೆ ಅಯ್ಯಂಗಾರ್ ಬೇಕರಿ. ಮಾರುವುದು ಕೇಕು, ಪಾಕು ಅಂತಹ ಅನಾಚಾರದ ವಸ್ತುಗಳು ಎಂದು ಬೈದುಕೊಳ್ಳುವರು. ಆದರೆ ಪಾಪ, ಅವರಿಗೆ ಸಾಯುವ ಮುನ್ನ ನಿಮ್ಮ ಬೇಕರಿಯ ಕೇಕು ತಿನ್ನಬೇಕೆಂಬ ಚಪಲವಾಯಿತು. ನಾನೂ, ನನ್ನ ತಂಗಿಯೂ ಅವರಿಗೆ ನಿಮ್ಮ ಕೇಕು ಶುದ್ಧ ಶಾಖಾಹಾರಿಯೆಂದರೆ ಪರವಾಗಿಲ್ಲ ಎಂದು ಹೇಳಿ ಕಡೆಗೂ ಒಂದು ತುಂಡನ್ನು ತಿನ್ನಿಸಿಯೇ ಬಿಟ್ಟೆವು. ಅದಾದ ಕೆಲವು ದಿನಗಳ ನಂತರ ಹೋಗೇ ಬಿಟ್ಟರು'' ನಾಣಿಗೆ ಅಜ್ಜಿಯ ಜ್ಞಾಪಕ ಬಂದು ಕಾಣಿಸಿತು.

ಕೆಲ ನಿಮಿಷ ಇಬ್ಬರೂ ಪೇಯದಲ್ಲಿ ತಮ್ಮ ತಮ್ಮ ವಿಚಾರಗಳಲ್ಲಿ ತಲ್ಲೀನರಾದರು. ಹೊರಗೆ ಚಳಿ ಕೊರೆಯುತ್ತಿತ್ತು.

ಸ್ವಲ್ಪ ಹೊತ್ತಿನವರೆಗೆ ಇಬ್ಬರೂ ಮಾತನಾಡಲಿಲ್ಲ. ಸೀನಿಯತ್ತ ನೋಡುತ್ತಾ ನಾಣಿ ''ಈ ಕಡ್ಡೀ ಪೈಲ್ವಾನ ಎಷ್ಟೊಂದು ದಪ್ಪನಾಗಿಬಿಟ್ಟ. ಮುಖವೂ ಕೆಂಬಾಗಿ ಇಲ್ಲಿನವರ ತರಹವೇ ಆಗಿಬಿಟಿದ್ದಾನೆ'' ಎಂದುಕೊಂಡ. ''ಈ ನರಪೇತಲ ನಾರಾಯಣ ಎಷ್ಟೊಂದು ಬೆಳೆದುಬಿಟ್ಟಿದ್ದಾನೆ. ಆದರೂ ನನಗಿಂತ ಅವನೇ ಸುಖಿ. ಅಲ್ಲಿಯೇ ಇದ್ದು ಅಲ್ಲಿಯೇ ಸ್ಥಿರವಾಗಿದಾನೆ ಮಣ್ಣಿನ ಮಗ'' ಎಂದು ನಿಟ್ಟುಸಿರುಬಿಟ್ಟ.

ಪಬ್ಬು ಮುಚ್ಚುವ ಸಮಯವಾಯಿತೆಂದು ಅಲ್ಲಿನ ಗಂಟೆ ಬಾರಿಸಲಾಯಿತು. ಹಳೆಯ ನೆನಪುಗಳಿಂದ, ಪೇಯದ ಮಾದಕತೆಯಿಂದ ಭಾರವಾದ ತಲೆಗಳನ್ನು ಎತ್ತಿ ಇಬ್ಬರು ಗೆಳೆಯರೂ ಒಬ್ಬರನ್ನೊಬ್ಬರು ನೋಡಿ ನಕ್ಕರು, ನಿಟ್ಟುಸಿರುಬಿಟ್ಟರು. ಇನ್ನು ಮತ್ತೆ ನೋಡುವುದು ಯಾವ ಕಾಲಕ್ಕೋ?

ನಿಧಾನವಾಗಿ ಗ್ಲಾಸನ್ನು ಮೇಜಿನ ಮೇಲಿಡುತ್ತಾ ಸೀನಿ ಹೇಳಿದ. ''ಗುರೂ, ಇನ್ನೂ ಭೇಟಿ ಆಗುವುದೋ ಇಲ್ಲವೋ? ನಿನ್ನ ಹತ್ತಿರ ಒಂದು ವಿಚಾರಕ್ಕೆ ಕ್ಷಮಾಪಣೆ ಕೇಳಲೇಬೇಕು ಇಲ್ಲ ಎನ್ನಬೇಡ''.

''ಹೇಳು ಮರಿ, ಹೆದರಬೇಡ, ಇದು ಬೆಂಗಳೂರಲ್ಲ'' ಎಂದ ನಾಣಿ

ಧಾರಾಳವಾಗಿ.

''ನಮ್ಮ ಅಯ್ಯಂಗಾರ್ ಬೇಕರಿಯಲ್ಲಿ ಕೆಲಸಕ್ಕಿದ್ದ ವರದು ಜಗಳ ಮಾಡಿಕೊಂಡು ಹೋದ ಮೇಲೆ, ನಮ್ಮ ಹತ್ತಿರ ಕೋಳಿ ಮೊಟ್ಟೆ ಹಾಕದೇ ಮಾಡುವ ಕೇಕುಗಳನ್ನು ತಯಾರಿಸಲು ಬೇರೆ ಯಾರೂ ಸಿಗಲಿಲ್ಲ. ಗಿರಾಕಿಗಳು ತಪ್ಪಬಾರದೆಂದು, ನಾನೇ ಕಂಟೋನ್ಮೆಂಟಿಗೆ ಹೋಗಿ, ಸೆಬಾಸ್ಟಿಯನ್ ಬೇಕರಿಯಿಂದ ಕೇಕು, ಬಿಸ್ಕತ್ತುಗಳನ್ನು ತರುತ್ತಿದ್ದೆ...ನಿಮ್ಮ ಅಜ್ಜಿಗೆಂದು ನೀನು ತೆಗೆದುಕೊಂಡು ಹೋಗಿದ್ದ ಕೇಕು ಶಾಖಾಹಾರಿ ಆಗಿರಲಿಲ್ಲ'' ಶ್ರೀನಿವಾಸ ಅಯ್ಯಂಗಾರ್‌ನ ಮುಖದಲ್ಲಿನ ದುಃಖ ಯಾರ ಹೃದಯವನ್ನಾದರೂ ಕರಗಿಸಬಹುದಾಗಿತ್ತು.

''ಪರವಾಗಿಲ್ಲ ಬಿಡು ಸೀನಿ. ನಮ್ಮಜ್ಜಿ ಯಾವಾಗಲೋ ಸಂಪಿಗೆ ಮರವಾದರು. ಆದರೆ ಸೀನಿ.. ನೀನೂ ನನ್ನನ್ನು ಕ್ಷಮಿಸಬೇಕು ಗುರೂ.. ನಮ್ಮ ಪಕ್ಕದ ಮನೆ ಕಲ್ಯಾಣಿಗೆ ನೀನು ಒಂದು ಪ್ರೇಮಪತ್ರ ಬರೆದು ಅದನ್ನು ಅವಳಿಗೆ ಗುಟ್ಟಾಗಿ ಕೊಡು ಎಂದಿದ್ದೆಯಲ್ಲ. ಅದನ್ನು ನಾನು ಮರೆತೇ ಬಿಟ್ಟೆ. ನೀನು ಇಲ್ಲಿಗೆ ಬಂದ ಐದು ವರ್ಷಗಳ ಮೇಲೆ ಕಲ್ಯಾಣಿಗೆ ಮದುವೆಯಾಯಿತು. ಅವಳ ಗಂಡ ಅವಳಿಗೆ ತಾಳಿ ಕಟ್ಟುತ್ತಿದ್ದ ಸಮಯದಕ್ಕೇ ನನಗೆ ನಿನ್ನ ಪ್ರೇಮಪತ್ರದ ನೆನಪಾದದ್ದು. ಕ್ಷಮಿಸುತ್ತೀಯಾ ಗೆಳೆಯ! '' ಎಂದು ಯಾಚಿಸಿದ ನಾರಾಯಣ ರಾವ್.

''ಹಾಗಾದರೆ ಆ ಪ್ರೇಮಪತ್ರ ಏನಾಯಿತು ಮರಿ? ನಿಮ್ಮಪ್ಪ, ಹಳೇ ಪೇಪರಿನವನು ತೆಗೆದುಕೊಳ್ಳುವ ಚಿಕ್ಕ ಚಿಕ್ಕ ಕಾಗದಗಳನ್ನೆಲ್ಲಾ ಪೇರಿಸಿ ನಮ್ಮ 'ಅಯ್ಯಂಗಾರ್ ಬೇಕರಿ' ಗೆ ಮಾರುತ್ತಿದ್ದರಲ್ಲ, ಅದರಲ್ಲಿ ನಾನು ಕಲ್ಯಾಣಿಗೆ ಬರೆದ ಪ್ರೇಮಪತ್ರ ಸೇರಿ ಹೋಗಿ, ನಮ್ಮ ಅಂಗಡಿಯಿಂದ ಯಾರೋ ಖಾರದ ಅವಲಕ್ಕಿ ಕಟ್ಟಿಸಿಕೊಂಡು ಹೋದವರು, ಅದನ್ನು ತಿಂದನಂತರ, ಆ ಕಾಗದದಲ್ಲಿ ಕೈ ಒರೆಸಿಕೊಂಡು ಬಿಸಾಡಿರಬೇಕು. ಹಾ...ಹಾ...ಹಾ...ಹಾ...'' ಎನ್ನುತ್ತಾ ಶ್ರೀನಿವಾಸ ಅಯ್ಯಂಗಾರ್ ಗಹಗಹಿಸಿ ನಕ್ಕ.

ನಗು ತುಂಬಾ ಸಾಂಕ್ರಾಮಿಕವಲ್ಲವೆ? ಸೀನಿಯೊಂದಿಗೆ ನಾಣಿಯೂ ಜೋರಾಗಿ ನಕ್ಕ. ನಗುತ್ತಲೇ ಇಬ್ಬರೂ ವಿದಾಯ ಹೇಳಿ ಬೇರೆ ಬೇರೆ ದಿಕ್ಕಿನಲ್ಲಿ ಹೊರಟರು ಪರದೇಶಿಗಳು!

# ನಾನು ಯಾರು?

**ಯು. ಎಸ್. ರಾವ್**

ಮೊದಲೇ ಹೇಳಿಬಿಡುತ್ತೇನೆ - ಇದು ಅಧ್ಯಾತ್ಮದ ಬರಹವಲ್ಲ. ಅದರಲ್ಲಿ, ನಾನು ಎಂದರೆ ಈ ದೇಹವಲ್ಲ, ಈ ಮನಸ್ಸಲ್ಲ, ಈ ಬುದ್ಧಿಯಲ್ಲ, ಇತ್ಯಾದಿ ಬರುತ್ತದೆ (ಹೇಗೂ ಮುಂದೆ ಏನೆಂದು ನನಗೆ ತಿಳಿದಿಲ್ಲ).

ನಾನು ಯಾರು ಎಂಬುದು, ನಡೆದ ಮತ್ತು ನಡೆಯುತ್ತಿರುವ ಘಟನೆಗಳಿಂದಾಗಿ, ನನಗೆ ಬಂದ ಸಂದೇಹ. ಈ ಘಟನೆಗಳನ್ನು ಸ್ಥೂಲವಾಗಿ ಮೂರು ಹಂತಗಳಾಗಿ ವಿಭಾಗಿಸಬಹುದು.

**1. ನಾನು ನಾನೇ - ಅವನು ಅವನೇ.**

ಈ ಹಂತದ ಘಟನೆಗಳು ಮೀಸೆ ಬಿಡುವಾಗಲೇ ಆರಂಭವಾಗುತ್ತವೆ. ಆಗಾಗ ಕೆಲವರು ''ನೀನು ಥೇಟು......ನ ಹಾಗೆ ಕಾಣುತ್ತೀಯಾ'' ಎನ್ನುತ್ತಿದ್ದರು. ಹೋಲಿಕೆ ಹೆಚ್ಚಾಗಿ, ಎಲ್ಲರಿಗೂ ತಿಳಿದ ಚಿತ್ರನಟ ಅಥವಾ ಪ್ರಸಿದ್ಧ ವ್ಯಕ್ತಿಗೆ. ನಾನು ಹೋಲಿಕೆಗೆ ಈಡಾದವರನ್ನು ನೋಡಿರದಿದ್ದರೂ, ಮನಸ್ಸಿನಲ್ಲೇ ಉಬ್ಬುತ್ತಿದ್ದೆ. ಆದರೆ, ಇಲ್ಲಿ ನಾನು ನಾನೇ - ಅವನು ಅವನೇ ಸಂಶಯವಿಲ್ಲ. ಸಾಧಾರಣ ಎಲ್ಲರಿಗೂ ಹೀಗೆ ನಡೆಯುತ್ತವೆ.

**2. ಅವನಂತೆ ನಾನು**

ಈ ಹಂತ ನಾನು ಮುಟ್ಟಿದಾಗ ನಡೆದುದನ್ನು ಒಂದೆರಡು ಉದಾಹರಣೆಗಳಿಂದ ಹೇಳುತ್ತೇನೆ.

ಮಾರ್ಗದಲ್ಲಿ ಹೋಗುತ್ತಿರುವಾಗ, ಎದುರಿಗೆ ಬರುತ್ತಿದ್ದವನೊಬ್ಬ ನನ್ನನ್ನು ನಿಲ್ಲಿಸಿ, ''ನೀವು.....ಅಲ್ಲವೇ?'' ಎಂದು ಕೇಳಿದ. ನನಗೆ ಯಾರ ಹೆಸರನ್ನು ಅವನು ಹೇಳಿದನೆಂದು ತಿಳಿಯಲಿಲ್ಲ. ಕೇಳಿದರೆ, ಅವರು ಅದೇ ಊರಿನ ಇಂಥಹ ಭಾಗದಲ್ಲಿದ್ದ ಒಬ್ಬ ಡೆಂಟಿಸ್ಟ್ ಎಂದ. ಮುಂದುವರಿಸಿ ಹೇಳಿದ - ''ನಡೆಯುವ ರೀತಿ, ಎತ್ತರ, ಮುಖಚರ್ಯೆ, ಎಲ್ಲವೂ ಅವರಂತೆಯೇ'' ಕೊನೆಗೆ ಕ್ಷಮಾಪಣೆ ಕೇಳಿ ನಡೆದುಬಿಟ್ಟ. ಕುತೂಹಲ ತಡೆಯಲಾರದೇ, ಹುಡುಕಿಕೊಂಡು ಹೋದೆ - ನೋಡಿ ಬಿಡುವ ಎಂದು. ಆದರೆ ಅಂತಹ ಡೆಂಟಿಸ್ಟ್ ಆ ಭಾಗದಲ್ಲಿ ಇರಲೇ ಇಲ್ಲ. ಹಾಗಿದ್ದರೆ ಆ ಮನುಷ್ಯ ಸುಮ್ಮನೆ ಕಥೆ ಕಟ್ಟಿ ಹೇಳಿದನೇ? ಇರಲಿಕ್ಕಿಲ್ಲ. ಯಾಕೆ ಹೇಳಿಯಾನು? ಅನೇಕ ದಿನ ಇದು ನನ್ನ ತಲೆ ತಿನ್ನುತ್ತಿದ್ದಿತು. ಆ ಮನುಷ್ಯ ಕೂಡ ಮತ್ತೆ ಸಿಕ್ಕಲಿಲ್ಲ. ಕ್ರಮೇಣ ಮರೆಯಿತೆನ್ನಿ.

ಇನ್ನೊಂದು ಸಲ, ವಯಸ್ಸಾದವರೊಬ್ಬರು ಹಿಂದಿನಿಂದ ಕೈತಟ್ಟಿ ಕರೆಯುತ್ತಾ ಬಂದರು. ನನ್ನ ಮುಖ ನೋಡಿದೊಡನೆ, ಏನೋ ಸಂಶಯ ಬಂದಿರಬೇಕು - ''ನೀವು....ಅಲ್ಲವೇ'' - ಅದೇ ಪ್ರಶ್ನೆ. ''ಅಲ್ಲ'' ಎಂದೆ. ಪಾಪ - ಅವರಿಗೆ ತುಂಬ ಬೇಸರವಾಯಿತು. ನೋಡ

ನೋಡುತ್ತಿರುವಾಗ ಕಣ್ಣು ತುಂಬಿ ಕೂಡ ಬಂದಿತು. ನಾನು ಅವರೆಣಿಸಿದ ವ್ಯಕ್ತಿ ಅಲ್ಲವೆಂಬ ನಿರಾಶೆ ಬೇರೆ - ನಾನು ಸಿಟ್ಟಾಗಬಹುದೆಂಬ ಭಾವನೆ ಬೇರೆ ಇರಬೇಕು. ನನಗೆ ಅವರ ಮುಖ ನೋಡಲು ಸಾಧ್ಯವಾಗಲಿಲ್ಲ. ನಾನು ಯಾಕಾದರೂ ''ಅವನಾಗಲಿಲ್ಲ'' ಎಂದು ಕೂಡ ಒಂದು ಕ್ಷಣ ವ್ಯಥೆ ಪಟ್ಟೆ - ಹಾಗಾಗಿದ್ದರೆ, ಇವರಿಗಾಗುವ ನೋವಾದರೂ ಉಳಿಯುತಿದ್ದಿತಲ್ಲ ಎಂದು. ''ಅವರಂತೇ ಕಂಡಿರಿ - ಕ್ಷಮಿಸಿ'' ಎಂದು ಬಾರಿ ಬಾರಿಗೂ ಹೇಳುತ್ತ ನಿಂತವರನ್ನು, ಉಪಾಯವಿಲ್ಲದೆ ಅನುಕಂಪ ಸೂಚಿಸುತ್ತ ಅಷ್ಟು ದೂರ ಅವರೊಡನೆ ನಡೆದು ಸಾಗಹಾಕಿದೆ. ಕೈ ಮುಗಿಯುತ್ತ ಬೀಳ್ಕೊಂಡರು.

ಈ ಹಂತ ಗಮನಿಸಿರಿ - ಹೋಲಿಕೆಯ ವ್ಯಕ್ತಿ ಯಾರೊಬ್ಬ ಪ್ರಸಿದ್ಧ ವ್ಯಕ್ತಿ ಅಲ್ಲ. ಸಾಮಾನ್ಯವಾಗಿ ಅಂತಹ ವ್ಯಕ್ತಿ ಇಲ್ಲವೇ ಇಲ್ಲ ಎನ್ನಬಹುದು. ಆದರೆ ತಪ್ಪಿಬಿದ್ದ ಜನರಿಗೆ ತುಂಬ ಶಾಕ್ ಆಗುವುದು ಸ್ಪಷ್ಟ. ನಾಲ್ಕೈದು ಬಾರಿ ಹೀಗೆ ನಡೆಯುವಾಗ ನನಗೇ ಏನೇನೋ ಎನಿಸಿತು. ಹಾಗೆಂದು, ಈ ಘಟನೆಗಳು ದಿನಬಿಟ್ಟು ದಿನ ಬರಲಿಲ್ಲವೆನ್ನಿ. ಒಂದು ಮರೆಯುವಾಗ ಒಂದು ಎಂಬಂತೆ ಬಂದುವು. ಆದರೂ ಪ್ರತಿಯೊಂದು ಸಲ ಹಿಂದೆ ನಡೆದುದು ಜೀವ ಪಡೆಯುತಿದ್ದಿತು. ಈ ಹಂತ ತುಂಬ ದೂರ ಬಂದಿತು - ಮಧ್ಯ ವಯಸ್ಸು ಕಳೆಯುವವರೆಗೂ.

3. ನಾನು ಅವನೇ

ಇದು ಈಗಿನ ಹಂತ ಕೇಳಿ. ನಮ್ಮ ಮನೆಯ ಮಾರ್ಗದ ಕೊನೆಯಲ್ಲಿ, ಬಾಳೆಹಣ್ಣು, ಬೀಡಾ, ಸಿಗರೆಟ್‌ಗಳ ಸಣ್ಣ ಅಂಗಡಿಯೊಂದಿದೆ. ನಾನು ಖಾಯಂ ಗಿರಾಕಿ. ಮೊನ್ನೆ ಸಂಜೆ ಬಾಳೆಹಣ್ಣು ಕೊಳ್ಳುತ್ತಿರುವಾಗ, ಅಂಗಡಿಯವನು ನನ್ನನ್ನೇ ದಿಟ್ಟಿಸಿದ - ''ಏನಪ್ಪಾ'' ಎಂದೆ. ಏನಿಲ್ಲ ಎಂಬಂತೆ ತಲೆ ಅಲ್ಲಾಡಿಸಿದ. ಇವನ ಮನಸ್ಸಿನಲ್ಲಿ ಏನೋ ಇದೆ ಎಂದು ತಿಳಿದು, ಒಂದು ಸಿಗರೇಟ್ ತೆಗೆದುಕೊಂಡು ಸೇದುತ್ತಾ, ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತಾಡಿ, ಕೊನೆಗೆ ತಿರುಗಿ ಕೇಳಿದೆ - ''ಹಾಗೇಕೆ ನೋಡಿದೆ'' ಎಂದು. ಮುಜಗರ ಪಡುತ್ತಾ ಹೇಳಿದ - ''ಸ್ವಾಮಿ - ನೀವು ಈಗ ಸ್ವಲ್ಪ ಸಮಯದ ಹಿಂದೆ ಬಂದು ಬಾಳೆಹಣ್ಣು ತೆಗೆದುಕೊಂಡು ಹೋದಂತೆ ತೋರಿತು''. ನನಗೆ ಬೆಜ್ಜರ. ಅವನು ಬೇರೆ ಜ್ಞಾನದಲ್ಲಿ ಯಾರನ್ನೋ ನಾನೆಂದು ತಿಳಿದುಕೊಂಡಿರಬೇಕು ಆದರೆ, ದಿನಾ ನೋಡುವ ಅವನು ಹೇಗೆ ತಪ್ಪಿ ಬಿದ್ದಾನು - ಅದೂ ಹಾಡು ಹಗಲಿನಲ್ಲಿ.

ಈ ಹಂತದಲ್ಲಿ, ಹೆಚ್ಚಿನವರು ನಾನು ಅವನಲ್ಲವೆಂದು ಹೇಳಿದರೆ ನಂಬುವುದಿಲ್ಲ. ತಿರುಗಿ, ತಿರುಗಿ ದಿಟ್ಟಿಸುತ್ತಾ, ಹಿಂದೆ ನೋಡುತ್ತಾ ಮೆಲ್ಲಗೆ ಬೀಳ್ಕೊಳ್ಳುತ್ತಾರೆ. ನಾನು ಯಾವುದೋ ಕಾರಣದಿಂದ, ''ಅವನಲ್ಲ'' ವೆಂದು ಸುಳ್ಳು ಹೇಳಿರಬೇಕು ಎಂದು ಅವರ ಮುಖ, ದೃಷ್ಟಿ ಹೇಳುತ್ತದೆ.

ಈಗ, ಮಾರ್ಗದಲ್ಲಿ ಯಾರಾದರೂ ನನ್ನನ್ನೇ ನೋಡಿ ಪ್ರಶ್ನಿಸುವ ಚಿಹ್ನೆ ಕಂಡರೆ, ಬೇಗನೆ ಕಣ್ಣು ತಪ್ಪಿಸಿ, ಬೇಗ ಬೇಗನೆ ನಡೆಯಲು ಪ್ರಾರಂಭಿಸುತ್ತೇನೆ. ಅಲ್ಲಿಯೇ ಅಡ್ಡಮಾರ್ಗ ಏನಾದರೂ ಇದ್ದರೆ, ತಿರುಗಿಕೊಂಡು ಬಿಡುತ್ತೇನೆ.

ಹೀಗೆಯೇ ದಿನ ಕಳೆಯಬಹುದಿತ್ತೋ ಏನೋ! ಹೇಗಿದ್ದರೂ ದಿನಾ ನಡೆಯುವ ಸಂಗತಿಯೇನಲ್ಲವಲ್ಲ! ಆದರೆ ಮೊನ್ನೆ ಬಂದ ನನ್ನ ಬಾಲ್ಯಮಿತ್ರ ನನ್ನನ್ನು ಗಾಬರಿಗೊಳಿಸಿದ್ದಾನೆ. ಅವನೇನೋ ದೊಡ್ಡ ಫಿಜಿಕ್ಸ್ ಪದವೀಧರ. ಅವನು ಹೇಳಿದ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಗೆ, (ಯಾಕೆ - ಪ್ರತಿ ಒಂದು ವಸ್ತುವಿಗೆ) ಪ್ರತಿವ್ಯಕ್ತಿ ಒಂದು ಇರಲೇ ಬೇಕಂತೆ. ಎಂದರೆ, ಈ ಸೃಷ್ಟಿಗೆ ಕನ್ನಡಿಯ ಬಿಂಬದಂತೆ ಪ್ರತಿಸೃಷ್ಟಿ ಇದೆಯಂತೆ. (ಇದನ್ನೇ ನಾವು ವಿಶ್ವಾಮಿತ್ರ ಸೃಷ್ಟಿ ಎಂದಿರಬಹುದೋ ಏನೋ) Matter - Anti matter ಎಂದೇನೋ ಹೇಳಿದ. ''ಹಾಗಿದ್ದರೆ, ಪ್ರತಿಯೊಬ್ಬನಿಗೂ, ಅಂತಹವನೇ ಇನ್ನೊಬ್ಬ ಡುಪ್ಲಿಕೇಟ್ ಇರುತ್ತಾನೆಯೇ?'' ಎಂದು ಕೇಳಿದೆ. ''ಖಂಡಿತ ಇರುತ್ತಾನೆ. ಆದರೆ ನೀವು ಒಬ್ಬರನ್ನೊಬ್ಬರು ನೋಡಲಾರಿರಿ'' ಎಂದ. ಇದು ನಿಜವಾದರೆ, ನಡೆದ ಕೆಲವು ಘಟನೆಗಳಿಗಾದರೂ ಒಂದು ಅರ್ಥ ಬಂದೀತು. ಏನೇನ್ನುತೀರಿ?



# ನಂಬಿದ್ರೆ ನಂಬಿ ಬಿಟ್ರೆ ಬಿಡಿ

**ವಿಜಯಾ ಸಚ್ಚಿದಾನಂದ್**

ಇಪ್ಪತ್ತೊರರಹರೆಯದಆತಅತ್ಯಂತಸ್ಫುರದ್ರೂಪಿ. ಯಾವಾಗಲೂನಸುನಗುತ್ತಿರುವ ತುಟಿಗಳ ಮೇಲೆ ತೆಳು ಗೆರೆಯಂತೆ ಬೆಳೆಸಿದ ಅವನ ಮೀಸೆ, ಎಳೆದು ತೀಡಿ ಬಾಚಿದ ಮಧ್ಯ ಬೈತಲೆಯ ಗುಂಗುರು ಕೂದಲಿನ ಕ್ರಾಪು, ಸ್ವಲ್ಪ ಹಸಿರೆಂದು ಹೇಳಬಹುದಾದ ಕಣ್ಣುಗಳು, ಎಣ್ಣೆಗೆಂಪು ಬಣ್ಣ, ಎತ್ತರದ ನಿಲುವು ನೋಡಿದವರನ್ನು ಮೋಡಿ ಮಾಡಿಸುತ್ತಿತ್ತಂತೆ. ಅದು ಇಂಗ್ಲೀಷಿನವರು ನಮ್ಮನ್ನು ಆಳುತ್ತಿದ್ದ ಕಾಲವಾದ್ದರಿಂದ ಅವನನ್ನು ಮೊದಲ ನೋಟಕ್ಕೆ ಕಂಡವರೆಷ್ಟೋ ಮಂದಿ ಅವನನ್ನು ಫಿರಂಗಿಯವರೆಂದೇ ಭಾವಿಸಿ ಬಿಡುತ್ತಿದ್ದರಂತೆ. ಮೇಲಾಗಿ ಅತ್ಯಂತ ಜಾಣ ಬೇರೆ. ಶಾಲೆಯ ದಿನಗಳಿಂದಲೂ ಕ್ಲಾಸಿನಲ್ಲಿ ಮಾಸ್ಟರು ಪ್ರಶ್ನೆ ಕೇಳಿ ಪೂರೈಸುವ ಮೊದಲೇ ಈತನ ಉತ್ತರ ತಯಾರಾಗಿರುತ್ತಿತ್ತೆಂಬ ಪ್ರತೀತಿ. ಅವನೊಬ್ಬ ಪುಸ್ತಕ ಬದನೇಕಾಯಿ. ದಿನವಿಡೀ ಓದಿದ್ದೇ ಓದಿದ್ದು! ಅಷ್ಟೇ ಅಲ್ಲಾ! ಅಲ್ಲಿ ಇಲ್ಲಿ ಕಂಡ ಪತ್ರಿಕೆಗಳನ್ನೆಲ್ಲಾ ಶೇಖರಿಸಿ ಇಡುವುದು, ಓದಿದ್ದನ್ನೇ ಪುನಃ ಪುನಃ ಓದುವುದು. ಅತ್ಯಂತ ಮುಖ್ಯ ಎನ್ನಿಸಿದ news item ಗಳನ್ನೆಲ್ಲಾ ಕತ್ತರಿಸಿ ಜೋಪಾನವಾಗಿ ತನ್ನದೇ ಆದ ಬೀರುವಿನಲ್ಲಿಶೇಖರಿಸಿಟ್ಟುಅದರಬೀಗದಕೀಲಿಯನ್ನುಯಾರಿಗೂಎಟುಕದರೀತಿಯಲ್ಲಿ ತನ್ನ ಜನಿವಾರದಲ್ಲಿ ಭದ್ರವಾಗಿ ಇಟ್ಕೊಂಡಿರ್ತಿದ್ದನಂತೆ. ಬಹುಷಃ ಈಗಿನ ಕಾಲದವನಾಗಿದಿದ್ರೆ"Walking Computer" ಅಂತನಾಮಕರಣಮಾಡುತ್ತಿದ್ದರೇನೋ? ಅವನ ಗೈರು ಹಾಜರಿಯಲ್ಲಿ ಯಾರಾದರೂ ಅವನ ರೂಮಿಗೆ ಹೋಗಿದ್ದೇ ಆದರೆ ರಂಪ ರಾಧ್ಧಾಂತಎಬ್ಬಿಸಿಭೂಮಿಆತುಳವನ್ನೆಲ್ಲಾ ಒಂದುಮಾಡಿಬಿಡುತ್ತಿದ್ದನಂತೆ.

ಯಾರು ತಾನೇ ಹೋಗೋದಕ್ಕೆ ಸಾಧ್ಯಾಂತ ಕೇಳ್ತಿರಾ? ಆಗಿನ ಕಾಲದ ಒಂದೊಂದು ಸಂಸಾರದಲ್ಲಿ ಹತ್ತು ಹನ್ನೆರಡು ಮಕ್ಕಳುಗಳು ಇರುತ್ತಿರಬೇಕಾದರೆ ಇವನ ಮನೆಯಲ್ಲಿ ಕೀರ್ತಿಗೊಬ್ಬ ಮಗ ಆರತಿಗೊಬ್ಬಳು ಮಗಳು ಅನ್ನುವಂತೆ ಇವನು ಮತ್ತು ಇವನ ತಂಗಿ ಸುಶೀಲ ಆದ್ರೂ ಆ ಅವಿಭಾಜಕ ಕುಟುಂಬದಲ್ಲಿ ಸುಮಾರು ಹದಿನೈದು ಮಂದಿ ಇದ್ದರು.

ಇನ್ನು ಸುಶೀಲ - ಅವನ ತಂಗಿ - ಸುಮಾರು ಹದಿನೇಳೋ ಹದಿನೆಂಟೋ ವರುಷವಿರಬಹುದು. ಚಿಕ್ಕವಳಿದ್ದಾಗ ನೆಪಮಾತ್ರಕ್ಕೆಂತ ಸ್ಕೂಲಿಗೂ ಸೇರಿಸಿದ್ದರಂತೆ. ಆಮೇಲೆ ಹುಡುಗಿ ದೊಡ್ಡವಳಾದಳೂಂತ ಸ್ಕೂಲು ಬಿಡಿಸಿ ಅಡಿಗೆ ಕೆಲಸಕ್ಕೆ ಹಾಕಿ ಅದರಲ್ಲಿ ಸಾಕಷ್ಟು ಪರಿಣತಿ ಪಡೆದ ಮೇಲೆ ಪಕ್ಕದೂರಿನ ಶಾನುಭೋಗರ ಮನೆಗೆ ಲಗ್ನ ಮಾಡಿದ್ದರಂತೆ. ಅವಳು ಎರಡು ಮಕ್ಕಳ ತಾಯಿ.

ಎಲ್ಲರ ಕೈಲೂ ಅವನು ಹೊಗಳಿಸಿಕೊಂಡಿದ್ದೇ ಹೊಗಳಿಸಿಕೊಂಡಿದ್ದು. ತೆಗಳಿಕೊಂಡೆ ಗೊತ್ತಿರಲಿಲ್ಲವಂತೆ. ಹೀಗೆಇವನಹೊಗಳಿಕೆಕೇಳಿಬೇಸತ್ತಿದ್ದಸಹಪಾಠಿಗಳುಇವನಿಗೆUIG ಅಂತnick name ಇಟ್ಟಿದ್ದರಂತೆ(Useless Information Gatherer ಅಂತ). ಆದ್ರೆ

ಅವನನ್ನೇ ಹಾಗೆ ಕರೆಯೋದು ಅವನಿಗೆ ಗೊತ್ತೇ ಇರಲಿಲ್ಲ ಬಿಡೀ.

ಇವನು ಚಿಕ್ಕಂದಿನಲ್ಲಿ ಚಂದಕೆ ಕತ್ತರಿಸಿ ಕ್ರಾಪು ಬಿಟ್ಟಾಗಲೇ ದೂರದ ಬಂಧು-ಬಳಗಕ್ಕೆಲ್ಲಾ ಇವನು ಜಾತಿ ಬಾಹಿರನಾದನೆಂದು ಕೋಪ ಅಸಡ್ಡೆ ಎಲ್ಲಾ. ಅದನ್ನೆಲ್ಲಾ ಗಮನಕ್ಕೆ ತಂದುಕೊಳ್ಳದೇ ತಾನು ಸಿವಿಲ್ ಸರ್ವೀಸ್ ಪರೀಕ್ಷೆಗೆ ಕಟ್ಟಬೇಕೆಂಬ ಧ್ಯೇಯವನ್ನೇ ಮುಂದಿಟ್ಟುಕೊಂಡು ದಿನ ಬೆಳಗಾದ್ರೆ ಪುಸ್ತಕ ಹಿಡಿದು ಪ್ರಪಂಚದವನ್ನೆಲ್ಲಾ ಮರೆತು ಕೂತಿರುತ್ತಿದ್ದನಂತೆ. ಒಬ್ಬರೊಂದಿಗೆ ಒಂದು ಮಾತಿಲ್ಲ ಕಥೆಯಿಲ್ಲ! ತಾನಾಯ್ತು ತನ್ನ ಪುಸ್ತಕವಾಯ್ತು! ಮನೆಯೋರಿಗೆಲ್ಲಾ ಇವನನ್ನ ನೋಡಿದ್ರೆ - ಇವ್ನು ಓದೋ ಪುಸ್ತಕಗಳನ್ನ ಕಂಡ್ರೆ ಏನೋ ಒಂದು ರೀತಿ ಭಯ. ತಾಯಿಯಂತೂ ಹೆತ್ತ ಮಗನೇ ಇವನಾ ಅಂತ ತನ್ನ ಮೂಗಿನ ಮೇಲೆ ತಾನೇ ಬೆರಳು ಇಟ್ಟುಕೊಳ್ಳೋಳಂತೆ. ಮನೇಲಿ ಅವನು ಹೇಳದ್ದೇ ವೇದವಾಕ್ಯ. ಯಾರಾದ್ರೂ ಇವನ ಮಾತನ್ನ ಮೀರಿ ನಡೆದ್ರೆ ಕೇಳ್ಬೇಕು ಇವನ ಹಾರಾಟಾನ್ನ. ಮನೆಯೋರನ್ನೆಲ್ಲಾ ನಡಗಿಸಿ ಬಿಡೋನಂತೆ.

ತನ್ನ ಕನಸನ್ನ ನೆನಸು ಮಾಡ್ಕೋಳ್ಳೋದ್ರಲ್ಲಿದ್ದಾನೆ. ICS ಪರೀಕ್ಷೆಗೆ ಕಟ್ಟಿದ್ದಾನೆ. ಪರೀಕ್ಷೆನೂ ಹತ್ತಿರ ಬಂದಿದೆ. ಅತ್ತೆ ಮನೆಯಿಂದ ಸುಶೀಲನ್ನ ಇವನ ಸಹಾಯಕ್ಕೆಂದೇ ಕರೆದುಕೊಂಡು ಬಂದಿದ್ದಾರೆ. ಸುಶೀಲ ತನ್ನೆರಡು ಎಳೆ ಮಕ್ಕಳನ್ನು ಹಿಂದಿನ ಉಗ್ರಾಣದ ಬದಿಯ ಕೋಣೆಯಲ್ಲಿ ನಾಗಜ್ಜಿಯ ಸುಪರ್ದಿಯಲ್ಲಿ ಬಿಟ್ಟಿದ್ದಾಳೆ. ಯಾಕೆಂದರೆ ಇವನು ಓದುವಾಗ ಅವುಗಳ ಅಳು ಕಿರುಚಾಟ ಇವನ ಕಿವಿ ತನಕ ಮುಟ್ಟಬಾರದಲ್ಲ!.

ಇವನ ಓದು ನಿರಂತರವಾಗಿ ಸಾಗುತ್ತಿದೆ. ಕೆಲವೊಮ್ಮೆ ಓದುತ್ತಾ ಓದುತ್ತಾ ಅಧೋಮುಖನಾಗಿ ಬಿಡುತ್ತಾನೆ - ಏನೋ ಯೋಚಿಸುತ್ತಾನೆ. ತಕ್ಷಣ ಎದ್ದು ಹಿಂಬದಿಗೆ ಹೋಗಿ ಓಣಿಗೆ ಹೋಗಿ ಹಿಂದಿನ ಬಾಗಿಲನ್ನು ಮುಚ್ಚಿ ಬರುತ್ತಾನೆ. ಅದನ್ನೇ ಅವಲೋಕಿಸುತ್ತಿದ್ದ ನಾಗಜ್ಜಿ ಸುಬ್ಬಜ್ಜಿ ಮತ್ತು ಇತರ ಮನೆಮಂದಿಗೆಲ್ಲಾ ಇದು ಅವನ ಓದಿನ ಒಂದು ಅಂಗವೇನೋ ಎಂದುಕೊಂಡು ಅವನನ್ನು ಕಂಡೊಡನೆ ತಟಸ್ಥರಾಗಿ ನಿಲ್ಲುತ್ತಾರೆ.

''ನನ್ನ ಪರೀಕ್ಷೆ ಮುಗಿಸುವ ತನಕ ಯಾರಾದ್ರೂ ಈ ಬಾಗಿಲನ್ನು ತೆರೆದರೋ ಅವರನ್ನು ಸಿಗಿದು ಹಾಕಿ ಬಿಡ್ತೀನಿ'' ಎಲ್ಲರನ್ನೂ ನೋಡಿ ಗರ್ಜಿಸಿದ. ಪಾಪ! ಬೆಳಗಿನಿಂದ ಹತ್ತು ಸಲ ಮುಚ್ಚಾಗಿತ್ತು. ಯಾವಾಗ ಹೋಗಿ ನೋಡಿದ್ರು ದೊಡ್ಡದಾಗಿ ತೆಗೆದಿರುತ್ತಿತ್ತು. ಮುಚ್ಚಿ ಮುಚ್ಚಿ ಸುಸ್ತಾಗಿದ್ದ. ಹೀಗೆ ಬಾಗಿಲು ಹಾಕಿ ತೆಗೆದು ಮಾಡ್ತಾಯಿದ್ರೆ ಪರೀಕ್ಷೇಲಿ ಪಾಸಾದ ಹಾಗೆ. ಇವನು ಗರ್ಜಿಸಿದ್ದಕ್ಕೆ ಅಲ್ಲೇ ಕಲಕಲಾತ ಗಲಾಟೆ ಮಾಡ್ತಾ ಆಡ್ತಾಯಿದ್ದ ವೆಂಕಿ, ಶೀನು, ಪುಟ್ಟ, ಪದ್ಮ ಎಲ್ಲಾ ಓ ಅಂತ ಅಳ ಹತ್ತಿದ್ದರು.

ಪರೀಕ್ಷೆ ಹಿಂದಿನ ದಿನ ಮಕ್ಕಳ ವಿನಃ ಮತ್ಯಾರು ನಿದ್ರಿಸಿದಂತೆಯೇ ಇಲ್ಲ. ಬೆಳಗ್ಗೆ ಎದ್ದವನೇ ಸ್ನಾನ ಮಾಡಿ ಹೊಸ ಪಂಚೆ ಧರಿಸಿದ. ಗರಿಗರಿಯಾಗಿ ಒಗೆದ ಷರ್ಟು, ಕರಿ ಕೋಟು, ಕಂಡೂ ಕಾಣದಂತೆ ಸಾದಿನ ಬೊಟ್ಟು ಕೆಳಗೊಂದು ಹಿಂದಿನ ದಿನದ ಅರ್ಚನೆಯ ಸಣ್ಣ ಕುಂಕುಮದ ಬೊಟ್ಟು, ಕೊನೆಯದಾಗಿ ಕರಿ ಟೋಪಿಯೊಂದ ಧರಿಸಿದ. ಕಂಕುಳಲ್ಲಿ ಪುಸ್ತಕದ ದೊಡ್ಡ ಕಟ್ಟೊಂದನ್ನು ಅಡಗಿಸಿದ. ಕಾತುರತೆಯಿಂದ ಅಮ್ಮನ ದರ್ಶನಕ್ಕಾಗಿ

ಕಾದು ನಿಂತ.

ಇವನು ಪರೀಕ್ಷೆಗೆ ಹೊರಡುವ ಮುನ್ನ ಅಮ್ಮ ಎಲ್ಲಿದ್ದರೂ ಏನು ಕೆಲಸ ಮಾಡುತ್ತಿದ್ದರೂ ಇವನ ಮುಂದೆ ಬರಬೇಕು. ಇವನು ಸಾಷ್ಟಾಂಗವೆರಗಬೇಕು. ಅಮ್ಮ ಮನಃಪೂರ್ವಕ ಹರಸಬೇಕು. ಅದೇ ತನ್ನ ಜಯಭೇರಿಯ ಗುಟ್ಟೆಂದು ಅವನ ನಂಬಿಕೆ.

ಎಷ್ಟು ಹೊತ್ತಾದರೂ ಅಮ್ಮ ಹೊರ ಬರಲಿಲ್ಲ. ಪಾಪ! ಅವಳು ಹೊರ ಬರುವ ಸ್ಥಿತಿಯಲ್ಲೂ ಇರಲಿಲ್ಲ. ಈಗಿನವರ ತರಹ ಅಂತಹ ಸಮಯದಲ್ಲಿ ರಾಜಾರೋಷವಾಗಿ ಮನೆಯೆಲ್ಲಾ ಓಡಾಡೋಣವೆಂದರೇನು? ಉಗ್ರಾಣದ ಇನ್ನೊಂದು ಬದಿಗಿದ್ದ ಪುಟ್ಟ ಕತ್ತಲು ಕೋಣೆಯಲ್ಲಿ ಚಾಪೆ ಚೊಂಬುಗಳೊಂದಿಗೆ ಕುಳಿತಿದ್ದಾಳೆ (ಹಿಂದಿನ ಕಾಲದ ಪದ್ಧತಿಯ ಅಪರಿಚಿತರ ಸುವಿಧಕ್ಕಾಗಿ - ಮೂರು ದಿನಗಳ ರಜೆಯಲ್ಲಿದ್ದಾಳೆ). ಅವಳು ಆ ಕೋಣೆಯಲ್ಲಿ ಕುಳಿತಿರುವ ವಿಷಯ ತಿಳಿದಂತೆಯೇ ಎಲ್ಲರ ಮೇಲೂ ಅಬ್ಬರಿಸಿದ. ''ಅಯ್ಯೋ! ಹಾಳಾದೋರು ಯಾರೋ ಆ ಹಿಂದಿನ ಬಾಗಲನ್ನು ತೆಗೆದು ಬಿಟ್ಟಿದ್ದಾರೆ. ತೆಗೀಬೇಡೀಂತ ಎಷ್ಟು ಬಡ್ಕೊಂಡೆ ನಾನು. ಈಗ ಆಗ್ಬಾರದ್ದು ಆಗ್ಹೋಯ್ತಲ್ಲಾ? ವೆಂಕ, ಕಿಟ್ಟಿ, ಶೀನಿ ಯಾರೋ ತೆಗೆದಿದ್ದು ಆ ಬಾಗ್ಲನ್ನ?

ನಿಜಹೇಳ್ರೊ, ಇಲ್ದಿದ್ರೆ ಸಿಗಿದು ಹಾಕ್ಬಿಡ್ತೀನಿ. ಏನೇ ಸುಶೀ! ನಿನಗಾದ್ರೂ ಜ್ಞಾನ ಬೇಡ್ವೇನೆ ಮುಚ್ಚೀಬೇಕೂಂತ, ಈಗ ನೋಡು ಏನಾಯ್ತು? ಎಲ್ಲಿತ್ತೋ ಆ ಹಾಳು ಕರಿ ನಾಯಿ, ಅಮ್ಮನ್ನ ಬಂದು ಮುಟ್ಬಿಟ್ಟಿದ್ಯಲ್ಲಾ. ಇನ್ನು ಮೂರು ದಿನ ಅವ್ರು ಆ ಕೋಣೆ ಬಿಟ್ಟು ಬರೋಲ್ಲ. ಅದಕ್ಕೇ ಬಡ್ಕೊಂಡೆ ಆ ಬಾಗ್ಲು ತೆಗೀಬೇಡಾಂತ''.

ಸುಶೀಗೆ ಒಂದು ನಿಮಿಷ ಏನು ಅರ್ಥವಾಗ್ಲಿಲ್ಲ. ಮಿಕ ಮಿಕಾಂತ ನೋಡಿದಳು. ತಾವು ಚಿಕ್ಕವರಿದ್ದಾಗ ಅಮ್ಮ ಹಾಗೆ ಕೂತಾಗಲೆಲ್ಲಾ ತನ್ನನ್ನು ಕರಿನಾಯಿಯೊಂದು ಬಂದು ಮುಟ್ಟಿ ಬಿಟ್ಟಿತ್ತೆಂದು ಹೇಳುತ್ತಿದ್ದದ್ದು ಜ್ಞಾಪಕಕ್ಕೆ ಬಂತು. ಬಾಯಿಗೆ ಸೆರಗನ್ನು ತುಂಬಿಕೊಂಡು ಉಕ್ಕಿಬಂದ ನಗುವನ್ನು ತಡಿಯುತ್ತಾ ಅಲ್ಲಿಂದ ಪರಾರಿಯಾದಳು.

ಇಷ್ಟು ಹೊತ್ತೂ ಏನೋ ಪ್ರಮಾದವಾಗಿ ಬಿಟ್ಟಿತೆಂದು ಹೆದರಿ ತುಟಿಪಿಟಕ್ಕೆನ್ನದ ನಿಂತಿದ್ದ ನಾಗಜ್ಜಿಗೆ ತಡೆಯಲಾರದ ನಗು. ''ಅಯ್ಯೋ! ಪೆದ್ಮುಂಡೇದೆ! ಕೊಂಚನಾದ್ರೂ ಪ್ರಪಂಚ ಜ್ಞಾನ ಅನ್ನೋದು ಬೇಡ್ವೇನೋ? ಹಾಳಾಗ್ಲಿ ಹೋಗು ಆ ಕೋಣೆ ಬಾಗ್ಲಲ್ಲೇ ನಿಂತು ಅಮ್ಮಂಗೆ ಹೇಳಿ ಹೋಗು'' ಅಂತ ತಮ್ಮ ಬೊಚ್ಚು ಬಾಯಿ ಇಷ್ಟಗಲ ಬಿಟ್ರಂತೆ.

ಅವನು ಅಜ್ಜನಾದ್ಮೇಲೂ ಅವನ ಅಡ್ಡ ಹೆಸ್ರು 'ಕರಿನಾಯಿ' ಅನ್ನೋದು ಅಂಟೇ ಇತ್ತಂತೆ.

# ಕನ್ನಡ - 2050

ತುರುವೇಕೆರೆ ಪ್ರಸಾದ್

(ಪದ್ಮಭೂಷಣ ಜಯಲಲಿತಾ ಯೂನಿವರ್ಸಿಟಿಯ ತಮಿಳು ವಿದ್ಯಾರ್ಥಿಯೊಬ್ಬ 'ನಾಡು-ನುಡಿ ಅವನತಿ - ಒಂದು ಅಧ್ಯಯನ' ಈ ವಿಷಯದ ಬಗ್ಗೆ ಪ್ರಬಂಧಕ್ಕೆ ಕಡತಗಳ ಧೂಳು ಕೊಡವುತ್ತಿದ್ದಾಗ ಸಿಕ್ಕ ಪತ್ರದ (ತೆಲುಗು, ತಮಿಳು, ಮಲಯಾಳಿ ಮಿಶ್ರಿತ) ಯಥಾವತ್ ಸಾರಾಂಶ. ನವದೆಹಲಿಯಲ್ಲಿ ಹಿಂದೆಂದೋ ಲೋಕಸಭಾ ಉಪಾಧ್ಯಕ್ಷರಾಗಿದ್ದ ಶ್ರೀ ಎಸ್.ಎಂ. ಎಂಬವರು ಉಪಯೋಗಿಸುತ್ತಿದ್ದರೆನ್ನಲಾದ, ಸದರಿ ಸಾಲಾರ್‌ಜಂಗ್ ಮ್ಯೂಸಿಯಂನಲ್ಲಿದೆ ಎಂದು ತಿಳಿಯಲ್ಪಟ್ಟಿರುವ ಕನ್ನಡ ಕಂಪ್ಯೂಟರ್ ಸಾಫ್ಟ್‌ವೇರ್ ಉಪಯೋಗಿಸಿ ಈ ಪತ್ರವನ್ನು ಕನ್ನಡೀಕರಿಸಲಾಗಿದೆ.)

''ಸುಮಾರು ಹತ್ತು ವರುಷಗಳ ಹಿಂದೆ ನಾನು ಬೋಂಡ ಕಟ್ಟಿಸಿಕೊಂಡ ಕಾಗದದಲ್ಲಿದ್ದ ಲಿಪಿಯನ್ನು ನೋಡಿ ಅತ್ಯಾಶ್ಚರ್ಯವಾಯಿತು. ಏಕೆಂದರೆ ಈ ಹಿಂದೆ ನಾನು ಅಂತಹ ಲಿಪಿಯನ್ನು ನೋಡಿಯೇ ಇರಲಿಲ್ಲ. ಕುತೂಹಲದಿಂದ ಅದನ್ನು ನಮ್ಮ ಪಿತಾಶ್ರೀಯವರಿಗೆ ತೋರಿಸಿದಾಗ ಅವರು 'ಇದನ್ನು ಎಲ್ಲೋ ನೋಡಿದಂತಿದೆ' ಎಂದು ತಮ್ಮ ಮೆದುಳಿಗೆ ಕೈ ಹಾಕಿಕೊಂಡು ಕೊಸರಾಡಿದರು. ನಮ್ಮ ತಾತನವರು ಅದನ್ನು ನೋಡಿ ಬೆಚ್ಚಿ ಬಿದ್ದು ಯಾವುದೋ ಭಯಾನಕ ರಹಸ್ಯವೆಂಬಂತೆ ''ಹುಡುಗು ಮುಂಡೇದೇ! ಸುಮ್ಮನಿದ್ದು ಬಿಡು, ಇದರ ಬಗ್ಗೆ ಸಂಶೋಧನೆ, ಅಭಿವೃದ್ಧಿ ಎಂದು ಹೋಗಿ ನಾಶವಾದಿಯೆ!'' ಎಂದು ಎಚ್ಚರಿಸಿದರು. ನಂತರ ಈ ಲಿಪಿಯ ಚಿದಂಬರ ರಹಸ್ಯದ ಬಗ್ಗೆ ಅತೀವ ಕುತೂಹಲವುಂಟಾಗಿ ಊರೂರು ಅಲೆದೆ. ಅದರ ಪರಿಣಾಮವಾಗಿ ಸಿಕ್ಕ ವಿವರಗಳು ಹೀಗಿವೆ.

'ಎನಿತು ಇನಿದು ಈ ಕನ್ನಡ ನುಡಿಯು' ಎಂದು ವರ್ಣಿಸತಕ್ಕ ಕನ್ನಡ ಭಾಷೆ ಎಂಬುದೊಂದಿತ್ತಂತೆ. ಕನ್ನಡಮ್ಮ, ಕನ್ನಡಾಂಬೆ, ಕನ್ನಡ ಭುವನೇಶ್ವರಿ ಎಂದೆಲ್ಲಾ ಕರೆಸಿಕೊಳ್ಳುತ್ತಾ ನವೆಂಬರ್ ತಿಂಗಳಲ್ಲಿ ಸಮೂಹ ಸನ್ನಿಧಿಯ ರೂಪದಲ್ಲಿ ಜನಗಳ ಮೈಮೇಲೆ ಬರುತ್ತಿದ್ದ ಈ 'ಭಾಷಾ ದೇವತೆ' ಕ್ರಮೇಣ ಅನ್ಯಭಾಷಾ ದೇವತೆಗಳ ಧಾಳಿಗೆ ಹೆದರಿ ಪಲಾಯನ ಮಾಡಿದಳಂತೆ. ಅದಕ್ಕೆ ಹಲವಾರು ಸಾಕ್ಷಿ ಪುರಾವೆ ಸಹಿತ ಕಾರಣಗಳು ದೊರೆತಿವೆ. ಅವುಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

ರಾಜಕೀಯವಾಗಿ, ಮುಕ್ತ ಮಾರುಕಟ್ಟೆ ತೆರೆದಾಗ, ವಿದೇಶೀಯರಿಗೆ ಕನ್ನಡಮ್ಮ ಪರಿಚಯವಾಗಲಿಲ್ಲ. ನಾಯಕರಿಗೆ 'ಕನ್ನಡ ಎನೆ ಕಿವಿ ಮರೆಯುವುದು' ಎಂಬಂತಾಯಿತು. 'ಕನ್ನಡ ಉಳಿಸಿ' ಎಂಬ ಘೋಷಣೆಯಂತೆ ಅದನ್ನು ಸಿಕ್ಕಾಪಟ್ಟೆ ಉಳಿಸಿದ್ದರಿಂದ ಅದು ತುಕ್ಕು ಹಿಡಿದು ಬಳಕೆಗೆ ಬಾರದಾಯಿತು. ಈ ಮಧ್ಯೆ ರಾಷ್ಟ್ರ ರಾಜಕಾರಣದ ರೂಪದಲ್ಲಿ ಜನಸಾಮಾನ್ಯನ ಸೇವೆಗೈಯಲು ನಾಯಕರುಗಳು ಹೊರಟಾಗ ಒಂದು ಹೊಳೆಯಲ್ಲಿ

ತಮಿಳು, ತೆಲುಗು ಎಳೆದುಕೊಂಡು ಇನ್ನೊಂದು ಹೊಳ್ಳೆಯಲ್ಲಿ ಕನ್ನಡವೆಲ್ಲಾ ಈಚೆ ಬಿಟ್ಟಾಗ 'ಕುಣಿದಾಡುವ ಕನ್ನಡ ಎದೆ' ಖಾಲಿಯಾಯಿತು. 'ಗದ್ದೆಗೆ ಹಸಿರುಡಿಸಿ, ಗದ್ದುಗೆ ಅಲ್ಲಾಡಿಸಿ, ಸಂಪುಟವನ್ನು ಸಡಿಲಿಸಿದ' ಕಾವೇರಿ ನೀರನ್ನು ನಾ ಮುಂದು ತಾ ಮುಂದು ಎಂದು ನಾಯಕರುಗಳು ಪಕ್ಕದ ರಾಜ್ಯಗಳಿಗೆ ಬಿಟ್ಟಾಗ ಗರ-ಬರ ಬಡಿದು ಅರ್ಧ ಜನ ಕನ್ನಡಿಗರು ಖಾಲಿಯಾದರಂತೆ. ಕೆಲವರು ಕಾವೇರಿಯೊಡನೇ ಶ್ಯಾಮನೀರಧಿಯಲ್ಲಿ ಕರಗಿದರು. ಮತ್ತೆ ಕೆಲವರು ಸತ್ಯಾಗ್ರಹ ಎಂದು ಸತ್ತರು. 'ಕೃಷ್ಣಾ ಯೋಜನೆ' ಗೊಂದು ಗತಿ ಕಾಣದೆ ಉತ್ತರದವರು 'ಗೋವಿಂದ' ಎಂದರು. ಆಮೇಲೆ ಉಳಿದವರನ್ನು ಅಲ್ಪ ಸಂಖ್ಯಾತ ಕನ್ನಡಿಗರು ಎಂದು ಗುರುತಿಸಿ ಅವರಿಗಾಗಿ 300 ಸರ್ಕಾರಿ ಆದೇಶಗಳನ್ನು ಹೊರಡಿಸಿ ವಿಶೇಷ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಯಿತಾದರೂ ಏನೂ ಪ್ರಯೋಜನವಾಗಲಿಲ್ಲ.

ಸಾಹಿತ್ಯಕವಾಗಿ ಎಲ್ಲರೂ ಕನ್ನಡದ ಬಗ್ಗೆ ಬರೆದರು. ಒಬ್ಬರು ಬರೆದದ್ದನ್ನು ಮತ್ತೊಬ್ಬರು ಮಾತ್ರ ಎಂದೂ ಓದಲಿಲ್ಲ. 'ಕನ್ನಡಕೆ ಹೋರಾಡು ಕನ್ನಡದ ಕಂದ' ಎಂದಿರುವುದರಿಂದ ಕನ್ನಡಕ್ಕೆ ಮಕ್ಕಳು ಮಾತ್ರವೇ ಹೋರಾಡಬೇಕು ಎಂದು ಭಾವಿಸಿ ದೊಡ್ಡವರು ಸುಮ್ಮನಾದರು. 'ಎಲ್ಲಾದರೂ ಇರು, ಎಂತಾದರೂ ಇರು' ಎಂಬುದಷ್ಟೇ ಓದಿ ಈ ನಾಡು ಬಿಟ್ಟು ಓಡಿದರು. ಕನ್ನಡತನದ ಕಲ್ಪತರುವನ್ನು ತಮ್ಮಲ್ಲಿ ಮಾತ್ರ ಉಳಿಸಿಕೊಂಡರು. ಕೊಳ್ಳುವವರಿಲ್ಲದ ಕನ್ನಡ ಪುಸ್ತಕ, ಪತ್ರಿಕೆಗಳು ರದ್ದಿ ಅಂಗಡಿ ಸೇರಿದವು.

ಸಾಮಾಜಿಕವಾಗಿ, ಜನ ಕನ್ನಡದಿಂದ ಕಾಸಿನ ಕಿಮ್ಮತ್ತಿಲ್ಲ ಎಂಬುದನ್ನು ಅರಿತುಕೊಂಡರು. ಕನ್ನಡ ಸಂಡಾಸಿಗೆ ಹೋಗುವ ಹವಾಯಿ ಚಪ್ಪಲಿಯಾಯಿತು. ಒಬ್ಬರಿಗೊಬ್ಬರಿಗೆ ಮಾತಿಲ್ಲ ಕತೆಯಿಲ್ಲ; ಸಂಘಜೀವನವಿಲ್ಲ. ಕೆಲಸ ಕೊಡುವವರಿಲ್ಲ, ಅನ್ನ ಹಾಕುವವರಿಲ್ಲ. ಸಾಲದ್ದಕ್ಕೆ ತಿರಸ್ಕಾರ ಬೇರೆ! ಕನ್ನಡ ಮಾತಾಡಿ ಮತ್ತೆ ಹೇಗೆ ಬದುಕುವುದು? ಕೀಳರಿಮೆ ಜನರನ್ನು ಕಾಡಿತು. ನರಕಕ್ಕೆ ಇಳುಸ್ದೆ, ನಾಲ್ಗೆ ಸೀಳುಸ್ದೆ, ಬಾಯಿ ಹೊಲಿಸ್ದೆ 'ಕನ್ನಡ ನಿನಗ್ಹೋಯ್ತು ಕಣ್ಣು, ಕಿವಿ, ಬಾಯಿ' ಅಂದ್ರು. ಬದುಕೊ ಭಾಷೆ, ಮಾರ್ಗ ಕಂಡುಕೊಂಡರು.

ಇವತ್ತು ಪಿಸಪಿಸನೆ ಕನ್ನಡ ಮಾತಾಡುವ ಜನ ಅಲ್ಲಲ್ಲಿ, ಕಾಡು ಮೇಡಲ್ಲಿ, ಗುಡ್ಡ ಗಾಡಲ್ಲಿ ಸಿಕ್ತಾರೆ. ಒಂದು ಕಾಲಕ್ಕೆ ಅವರ ರಾಜಧಾನಿ 'ಬ್ಯಾಂಗಲೂರ್' ಆಗಿತ್ತು ಎನ್ನುವುದಕ್ಕೆ ಯಾವ ಪುರಾವೆಯೂ ಇಲ್ಲ. ಅಲ್ಲಲ್ಲಿ ಸಿಗುವ ಹಳದಿ-ಕೆಂಪು ಪಟ್ಟಿ ಕಂಬಗಳು ಕನ್ನಡ ಧ್ವಜಸ್ತಂಭಗಳು ಎಂದು ಕೆಲವರು ಹೇಳುತ್ತಾರೆ. 'ಕನ್ನಡ ಕ್ರಾಂತಿವೀರ' ರ ಪಡೆಯೊಂದಿದೆ ಎಂಬ ಗುಮಾನಿಯಿದೆ. ಅವರು ಪ್ರತ್ಯೇಕ ನಾಡಿಗೆ ಹೋರಾಟ ನಡೆಸಿದ್ದಾರೆ ಎಂಬ ಗುಸುಗುಸು ಅಲ್ಲಲ್ಲಿ ಕೇಳಿ ಬರುತ್ತದೆ''.

★★★

# ಪರಿಹಾರದ ನೆರಳಲ್ಲಿ

**ಎಸ್. ರಾಮಮೂರ್ತಿ**

'ನಾವು ಸಾಯೋವರೆಗೂ ವಿದ್ಯಾರ್ಥಿಗಳೇ ಕಣ್ರಯ್ಯ' ಅಂತ ನನ್ನ ಜೊತೆ ನಿತ್ಯ ಊಟ ಮಾಡೋ ಡೈನಿಂಗ್ ಟೇಬಲ್‌ಮೇಟ್ಸ್‌ಗೆ ಎಷ್ಟು ಬಡಕೊಂಡರೂ ಅವನಿಗೆ ಅರ್ಥವೇ ಆಗೋಲ್ಲ. 'ಯಾವತ್ತು ನಾವು ಎಲ್ಲವನ್ನೂ ಕಲಿತೆವು ಅಂದುಕೋತಿವೋ ಅವತ್ತೇ ನಮ್ಮ ಬೆಳವಣಿಗೆ ನಿಂತ ಹಾಗೆ' ಅಂತ ಎಚ್ಚರಿಸಿದರೆ, ಹೆದರೋ ಬದಲು ಮುಸಿಮುಸಿ ನಗೋದೇ? 'ಅಯ್ಯೋ, ಇವರು ಬೆಳೀತಾ ಇಲ್ವಲ್ಲ. ಹೇಗೆ ಇವರ ಮನ ಒಲಿಸೋದು' ಅಂತ ಪೇಚಾಡೋ ಹಾಗಾಗುತ್ತೆ. ಇವರನ್ನು ಒಳ್ಳೆಯ ಹಾದಿಗೆ ಹಚ್ಚಬೇಕು ಅಂತ ಮನಸ್ಸಿನಲ್ಲೇ ನಿರ್ಧರಿಸಿಕೋತೀನಿ. ನನ್ನ ಕೊಲೀಗ್ಸ್‌ನ ನಾನು ಮುಂದಕ್ಕೆ ತರದಿದ್ದರೆ ಹೇಗೆ? ನಾನು ಕಲಿತದ್ದಕ್ಕೂ ಏನು ಪ್ರಯೋಜನ. ನಾವು ಒಟ್ಟು ಐದು ಜನ - ಎಂಕ, ಶೀನ, ನಾಣಿ, ನಾನು, ಕಿಟ್ಟಿ ಊಟಕ್ಕೆ ಕೂರೋದು.

'ಗೆಳೆಯನಿಂದ ಕಳಚಿಕೊಳ್ಳೋದು ಹೇಗೆ, ತಲೆ ತಿನ್ನುವುದು ಹೇಗೆ, ಹಜಾಮತ್ತು ಮಾಡಿಸಿಕೊಳ್ಳುವುದು ಹೇಗೆ, ಹೀಗೆ ಯಾವ ಯಾವುದೋ ಕೋರ್ಸುಗಳಿಗೆ ಹೋಗ್ತಿರ್ತೀಯಲ್ಲ, ಒಂದು ವಾರ ರಜ ಜಡಿದು ಈ ಸಲ ಯಾವ ಕೋರ್ಸಿಗೆ ಹೋಗಿದ್ದೆಯೋ?'

'ಇಲ್ಲದೇ ಇರೋ ತರಲೆ ಕೋರ್ಸ್‌ಗಳನ್ನು ಹುಟ್ಟಿಸಿಕೊಂಡು ಹೇಳಬೇಡಯ್ಯ, ಸಮಸ್ಯೆಗಳನ್ನು ಪರಿಹರಿಸಿಕೊಳ್ಳೋದು ಹೇಗೆ ಅನ್ನೋ ಕೋರ್ಸ್‌ಗೆ ಹೋಗಿದ್ದೆ'

'ಹ್ಯಾಗಿತ್ತಮ್ಮಾ ಕೋರ್ಸು?'

'ವಂಡರ್‌ಫುಲ್ ಕಣ್ರಯ್ಯ, ವಂಡರ್‌ಫುಲ್, ಹೋದರೆ ಇಂಥ ಕೋರ್ಸಿಗೆ ಹೋಗಬೇಕು. ಎಲ್ಲರೂ ಹೋಗಬೇಕು'

'ಹೌದಾ? ಕೋರ್ಸಿಗೆ ಹೋದರೆ ಸ್ಟೈಪೆಂಡ್ ಎಷ್ಟು ಕೊಡ್ತಾರೆ?'

'ಎಷ್ಟು ಕೊಡ್ತಾರೇ?! ಐನೂರು ರೂಪಾಯಿ ಫೀಸನ್ನ ನಾವೇ ಕೊಡಬೇಕು'

'ಪ್ರಾಬ್ಲಂ ಸಾಲ್ವ ಮಾಡೋದು ಹೇಗೆ ಅಂತ್ಲೋ, ಬೋಳಿಸಿಕೊಳ್ಳೋದು ಹೇಗೆ ಅಂತ್ಲೋ ಕೋರ್ಸ್ ಹೆಸರು?'

'ನಿಮಗೆ ಹೇಗ್ರಯ್ಯ ಹೇಳೋದು? ಮೊದಲು ನೀವೂ ಹೋಗ್ಬಿಟ್ಟು ಬನ್ನಿ. ಆಮೇಲೆ ನಿಮಗೇ ಗೊತ್ತಾಗುತ್ತೆ ಅದರ ಮಹತ್ವ'

'ಆಯ್ತು ದೊರೆ, ನಿನಗೇನೇನುಪಯೋಗ ಆಗಿದೆ ಹೇಳು'

'ಬೇಕಾದಷ್ಟಾಗಿದೆ'

(ಅಡಚಣೆಗಾಗಿ ಕ್ಷಮಿಸಿ. ಇಲ್ಲಿ ನಾಣಿ, ಶೀನ, ಎಂಕ ಕಿಟ್ಟಿಯರಲ್ಲಿ ಯಾರು ಕೇಳಿದರು ಅಥವಾ ಹೇಳಿದರು ಅನ್ನೋದು ಮುಖ್ಯವಲ್ಲ. ಯಾಕೆಂದರೆ ಏಕ್ ಸೆ ಏಕ್ ಕಮ್ ನಹೀಂ. ಅದಕ್ಕೇ ಮಾತುಗಳನ್ನು ಬರೀ 'ಕೋಟ್ಸ್'ಗಳಲ್ಲಿ ಹಾಕಿದ್ದೀನಿ. ಯಾರೂ ಹೇಳಿದರೂ ಯಾ ಕೇಳಿದರೂ ಒಂದೇ ಅನ್ನೋ ಅಭಿಪ್ರಾಯ. ಇನ್ನು ನನ್ನ ಉತ್ತರಗಳನ್ನು ಸುಲಭವಾಗಿ ಗ್ರಹಿಸಬಹುದು.)

'ಎಲ್ಲಿ ಒಂದೆರಡುಪಯೋಗಗಳನ್ನ ಹೇಳಪ್ಪ'

'ಊಂ.......ಹಾಂ.......ಒಂದು ವಿಷಯ ಹೇಳಿದರು'

'ಏನೋ?'

'ಪ್ರಾಬ್ಲಂ ಸಾಲ್ವ್ ಮಾಡಬೇಕಾದರೆ ಪ್ರಾಬ್ಲಂ ಏನು ಅನ್ನೋದು ಗೊತ್ತಾಗಬೇಕೂಂತ'.

'ಹೌದೂ ಅದು ಬೇಸಿಕ್ ಥಿಂಗು. ಅದರಲ್ಲೇನಿದೆ?'

'ಅದಲ್ವೋ ಪ್ರಾಬ್ಲಂ ಏನೂಂತ ಗೊತ್ತಾಗಿ ಬಿಟ್ಟರೆ ಪ್ರಾಬ್ಲಂ ಅರ್ಧ ಸಾಲ್ವ್ ಆದ ಹಾಗೇನಂತೇ'

'ಹೌದಾ?!' - ಕೋರಸ್!

'ಹೂಂ' -ನಾನು

'ಐನೂರು ರೂಪಾಯಿ ಬದಲು ಒಂದು ಬೆಣ್ಣೆ ಮಸಾಲೆ ಕೊಡಿಸಿದ್ದಿದ್ರೆ ನಾನೇ ಅದನ್ನ ಹೇಳಿ ಕೊಡ್ತಿದ್ದೆನಲ್ಲೋ'

'ಹೋಗ್ರೋಲೋ ನಿಮಗೆ ಎಲ್ಲಾ ತಮಾಷೇನೇ'

'ಹೋಗಲಿ ಇನ್ನೊಂದುಪಯೋಗ ಹೇಳಪ್ಪ'

''ನೋಡು, ಮೊನ್ನೆ ಬೆಳಿಗ್ಗೆ ಸೆಲೂನ್‌ಗೆ ಹೋಗಿದ್ದೆ'

'ತಿಂಗಳಿಗೊಂದೊಂದು ಸಲ ಬೋಳಿಸಿಕೊಳ್ಳಬೇಕಲ್ಲ. ಕೂದಲು ಪ್ಲಸ್ ಹತ್ತು ರೂಪಾಯಿ.'

'ಹತ್ತು ರೂಪಾಯೀ?! ನಾನು ಕೊಡೋದು ಹನ್ನೆರಡು'

'ನೀನೇನ್ಮಾಡ್ತೀಯಾ? ನಿನ್ನ ಮುಖ ಲಕ್ಷಣ ಇರೋದೇ ಹಾಗೆ'

'ಪ್ರತಿ ಸಲ ಹೋದಾಗಲೂ ಒಬ್ಬೊಬ್ಬ ಕಟಿಂಗ್ ಮಾಡೋಕೆ ಬರೋನು. ಪ್ರತಿ ಸಲ ಹೋದಾಗಲೂ ನಾನು ಹಿಂದುಗಡೆ ಸ್ಟೆಪ್ ಮಾಡಬಾರದು. ಸೈಡ್ ಲಾಕು ಮೂಗಿನ ತುದಿಯಿಂದ ಒಂದಿಂಚು ಮೇಲಿರಬೇಕು. ಕೂದಲು ಗ್ರಾಜುವಲ್ಲಾಗಿ ಉದ್ದವಾಗಬೇಕು. ಎಡಗಡೆ ಒಂದಿಂಚು ಕೂದಲಿರಬೇಕು. ಬಲಗಡೆ ನಾಲ್ಕೂವರೆ ಇಂಚಿರಬೇಕು - ಅಂತೆಲ್ಲಾ ಇನ್‌ಸ್ಟ್ರಕ್ಷನ್ ಕೊಡ್ತಿದ್ದೆ. ಇಷ್ಟೆಲ್ಲ ನೀಟಾಗಿ ಹೇಳಿದ ಮೇಲೂ ಕೂಡಾ, ಎಲ್ಲ ಮುಗಿದ ಮೇಲೆ ತಲೇನ ನೋಡಿಕೊಂಡರೆ, ಎಳನೀರು

ಬುರುಡೆ ಕೊಚ್ಚಿದ ಹಾಗೋ, ಕೂದಲೆಲ್ಲ ಒಂದು ಕಡೆ ಗುಪ್ಪೆ ಹಾಕಿದ ಹಾಗೋ ಕಟ್ ಮಾಡಿಬಿಡ್ತಿದ್ದ. ಇದುವರೆಗೂ ಒಂದು ಸಲಾನೂ ಯಾವ್ನೋನೂ ನನಗೆ ಸರಿಯಾಗಿ ಕ್ರಾಪ್ ಕಟ್ ಮಾಡೇ ಇಲ್ಲ. ಅದು ನನಗೆ ಒಂದು ದೊಡ್ಡ ಪ್ರಾಬ್ಲಂ ಆಗ್ಬಿಟ್ಟಿತ್ತು.'

ಎಲ್ಲರೂ ಊಟ ಮಾಡೋದನ್ನ ನಿಲ್ಲಿಸಿ ನನ್ನ ಕಡೇನೇ ನೋಡ್ತಿದ್ದರು. ಓಹೋ, ಕುತೂಹಲ ಕೆರಳಿದೆ. ಸರಿಯಾದ ಸಮಯ. ನನ್ನ ಪಾಯಿಂಟ್ ಅವರ ತಲೆಯೊಳಗೆ ಹೋಗೋ ಹಾಗೆ ಮಾಡಬೇಕು ಅಂತ ನಿರ್ಧರಿಸುತ್ತಿದ್ದಂತೆ ಹೇಳಿದೆ,

'ಕೋರ್ಸಿಗೆ ಹೋಗಿ ಬಂದ ಮೇಲೇ...'

'ಹುಂ'- ಕೋರಸ್.

'ಮೊನ್ನೆ ಹೋಗಿದ್ದೆ. ಕೂತೆ. ಈ ಸಲಾನೂ ಯಾವನೋ ಹೊಸಬನೇ. ಷರಟಿನ ಮೇಲಿನ ಗುಂಡಿ ಬಿಚ್ಚಿ, ಕಾಲರನ್ನು ಹಿಂದಕ್ಕೆಳೆದು, ಬಿಳೀ ಬಟ್ಟೆಯೊಂದನ್ನು ಹೊದಿಸಿ, ಕಾಲರ್ ಕ್ಲೋಸ್ ಮಾಡಿದ. ಕೈಯಲ್ಲಿ ಕತ್ತರಿ ಬಾಚಣಿಗೆ ಹಿಡಿದು 'ಲಾಂಗೋ ಷಾರ್ಟೋ?' ಅಂತ ಕೇಳಿದ. ನಾನು ಕನ್ನಡಿಯಲ್ಲೇ ಅವನನ್ನು ನೋಡ್ತಾ, ನಕ್ಕು, 'ನಿನ್ನಿಷ್ಟಪ್ಪ' ಚೆನ್ನಾಗಿದ್ದರೆ ಆಯ್ತು' ಎಂದೆ. ಕಣ್ಮುಚ್ಚಿದೆ - ನಿದ್ದೆ ಹೊಡೆಯುವವನಂತೆ. ನನ್ನ ತಲೆ ಮೇಲೆ ಅವನ ಕೈ ಮತ್ತು ಸಲಕರಣೆಗಳು ಓಡಾಡತೊಡಗಿದವು.

'ಆಯ್ತು ಸಾರ್' ಎಂದಾಗಲೇ ಎಚ್ಚರವಾದದ್ದು.

ಕಣ್ಣುಬಿಟ್ಟು ನೋಡಿದೆ, ನನ್ನ ಮುಖ ಇಷ್ಟು ಚೆನ್ನಾಗಿದೆಯಾ ಅನ್ನಿಸಿಬಿಡ್ತು ಮಾರಾಯ' ಅಂದೆ.

ಎಲ್ಲರೂ ಸ್ಟನ್ ಆಗಿಬಿಟ್ಟರು ಕೆಲವು ಕ್ಷಣಗಳ ಮೌನ.

'ಐನೂರು ಕೊಟ್ಟಿದ್ದಕ್ಕೆ ಒಂದು ದೊಡ್ಡ ಪ್ರಾಬ್ಲಂ ಸಾಲ್ವ್ ಆದ ಹಾಗಾಯಿತು ಅನ್ನಪ್ಪ'

'ಅದ್ಸರೀ, ನಿಮ್ಮ ಬಾಸ್‌ಗೂ ನಿನಗೂ ನಿತ್ಯ ರಬಿಂಗ್ ಇದ್ದೇ ಇರುತ್ತಲ್ಲ ನಿಮ್ಮ ಕೋರ್ಸು ಅದರ ಬಗ್ಗೆ ಏನಾದರೂ.....'

'ಸರಿಯಾಗಿ ಕೇಳಿದೆ ನೋಡು, ನಾನು ಆ ಕೋರ್ಸ್‌ಗೆ ಹೋಗಿದ್ದೇ ಈ ಪ್ರಾಬ್ಲಂ ಸಾಲ್ವ್ ಮಾಡಿಕೊಳ್ಳೋಕೇಂತ'. ಆದರೆ ಅಲ್ಲಿಗೆ ಹೋದ ಮೇಲೆ, ಅದು ಒಂದೊಂದು ಪ್ರಾಬ್ಲಂ ಸಾಲ್ವ್ ಮಾಡೋಕೋಸ್ಕರ ಸೂಚನೆ ಕೊಡೋ ಕೋರ್ಸ್ ಅಲ್ಲ ಅದು ಅಂತ ಗೊತ್ತಾಯ್ತು. ಚೆನ್ನಾಗಿ, ಅಂದರೆ ಸರಿಯಾಗಿ ಅರ್ಥ ಮಾಡಿಕೊಂಡರೇ, ಬರೀ ನಮ್ಮ ಬಾಸ್ ಜೊತೆಗಿನ ಸಮಸ್ಯೆಗಳೇ ಅಲ್ಲ ಇಡೀ ದೇಶದ ಸಮಸ್ಯೆಗಳನ್ನೆಲ್ಲಾ ಬಿಡಿಸಿ ಬಿಡಬಹುದು ಅನ್ನೋದನ್ನ ತಿಳಿಸಿದರು. ಸಾವಿರ ಕೊಟ್ಟಿದ್ದಕ್ಕೂ ಸಾರ್ಥಕ ಆಯ್ತು'

'ಸಾವಿರ?!! ಇಷ್ಟು ಹೊತ್ತೂ ಐನೂರು ಅಂದ್ಯಲ್ಲೋ?'

'ಐನೂರು ಒಬ್ಬರಿಗೆ ಕಣೋ, ಇಬ್ಬರಿಗಾದರೆ ಒಂದು ಸಾವಿರ ಅಲ್ವಾ?'

'ಇಬ್ಬರಿಗೆ ಸಾವಿರ ಸರೀ, ಆದರೆ ಇನ್ನೊಬ್ಬರು ಯಾರು? ಯಾರನ್ನ ಕರಕೊಂಡು ಹೋಗಿದ್ದೆ'

'ನನ್ನ ಹೆಂಡ್ತೀನ್ನ ಕಣ್ರಯ್ಯ'

'ಹೆಂಡ್ತೀನ ಕರಕೊಂಡು ಹೋಗಿದ್ಯಾ?'

'ಹುಂ, ಯಾಕೇ? ನಿನಗೇನೋ ನಿನ್ನ ಬಾಸ್ ಪ್ರಾಬ್ಲಂ ಆಗಿದ್ದ. ನಿನ್ನ ಹೆಂಡ್ತೀಗೇನಿತ್ತಯ್ಯ ಪ್ರಾಬ್ಲಮ್?'

'ನಾನೇ ಒಂದು ದೊಡ್ಡ ಪ್ರಾಬ್ಲಂ ಆಗಿದ್ನಂತೆ'!!!

★★★




"ಕೊಕ್ರೆ ಮನೇಗೆ ಊಟಕ್ಕೆ ಹೋದ್ರೆ ಸ್ಟ್ರಾ ತಗೊಂಡು ಹೋಗ್ಬೇಕು
ಅಂತ ನಮ್ಮಮ್ಮ ಹೇಳಿದ್ರು."

# ಹೆಸ್ರಲ್ಲೇನಿದೆ ಅಂತನ್ಬೇಡಿ

**ಬಿ.ಎಸ್. ಪ್ರಭಾಕರ್**

ನನ್ನ ನಾಲ್ಕು ವರುಷದ ಮಗುವನ್ನು LKGಗೆ ಸೇರಿಸುವುದಕ್ಕಾಗಿ ಒಂದು ಪ್ರತಿಷ್ಠಿತ ಸ್ಕೂಲಿಗೆ ಅಪ್ಲಿಕೇಶನ್ ಸಲ್ಲಿಸಿದ್ದೆ.

ಆ ಸಂಬಂಧವಾಗಿ ಸ್ಕೂಲಿನ ಪ್ರಿನ್ಸಿಪಾಲರಿಂದ ನನಗೆ ಇಂಟರ್‌ವ್ಯೂ ಬಂದಿತ್ತು. ಗೊತ್ತುಪಡಿಸಿದ್ದ ತಾರೀಕಿನ ದಿನ ಮಗುವಿನೊಂದಿಗೆ ಸ್ಕೂಲಿಗೆ ಹೋಗಿ ಪ್ರಿನ್ಸಿಪಾಲರನ್ನು ಕಂಡೆ.

ಪ್ರಿನ್ಸಿಪಾಲರು ನಾ ಸಲ್ಲಿಸಿದ್ದ ಅಪ್ಲಿಕೇಶನ್ ಅನ್ನು ಮುಂದಿಟ್ಟುಕೊಂಡು, ಅದರ ಮೇಲೆ ಕಣ್ಣಾಡಿಸಿ, ಆನಂತರ ನನ್ನನ್ನು ಕೆಂಗಣ್ಣಿನಿಂದ ನೋಡುತ್ತಾ ''ವ್ಹಾಃ! ಬೇಷ್! ಬ್ರೈನ್ ಅಂದ್ರೇ ಹೀಗಿರ್ಬೇಕು. ಸ್ಪೆಷಲ್ ಪ್ರೈಜ್ ಕೊಟ್ರೂ, ಸಾಲ್ದು, ಎಂ.ಎ. ಪಾಸ್ ಮಾಡಿದ್ರೂ ನಿಂಮುಂದೆ ನಾ ನಿಜ್ವಾದ ಎಮ್ಮೇನೇ ಆಗ್ಬಿಟ್ಟಿದೀನಿ'' ಅಂತ ವ್ಯಂಗ್ಯವಾಗಿ ತಮ್ಮನ್ನು ತಾವೇ ಅಧಃಕರಿಸಿಕೊಂಡರು.

ಪ್ರಿನ್ಸಿಪಾಲರ ವ್ಯಂಗ್ಯ ನಂಗೆ ಅರ್ಥ ಆಗಲಿಲ್ಲ. ಯಾವ ರೀತಿ ಉತ್ತರಿಸಬೇಕೆಂದು ತಿಳಿಯದೆ ''ನಿಜಾನಾ ಸಾರ್?'' ಅಂತ ನುಡಿದು, ತಕ್ಷಣ ತಿದ್ದಿಕೊಂಡು ''ಅಲ್ಲಾ.., ಯಾಕ್ಸಾರ್ ಹಾಗಂತೀರ?'' ಅಂತ ಹೆದರಿಕೆಯಿಂದ ಪ್ರಶ್ನಿಸಿದೆ.

''ಇನ್ನೇನ್ರೀ ಹೇಳ್ಳೀ? ಅಪ್ಲಿಕೇಶನ್ ಬೆಲೆ ತುಂಬಾ ಜಾಸ್ತಿ, ಒಪ್ಕೋತೀನಿ. ಆದ್ರೇ, ಹಾಗಂತ ಐದಾರು ಮಕ್ಳನ್ನ ಸಾರಾಸಗ್ಟಾಗಿ ಸೇರ್ಸಿ, ಒಂದೇ ಒಂದು ಅಪ್ಲಿಕೇಶನ್ ಕೊಟ್ಟು ಹಣ ಉಳಿಸ್ಬೇಕು ಅಂತ ಇದೀರ? ಅಲ್ಲಾ ನಮ್ಮನ್ನೇನು ಬಕ್ರಾಗ್ಳು, ಈಜಿಯಾಗಿ ಟೋಪಿ ಹಾಕ್ಬೌದು ಅಂತ ತಿಳ್ಕೊಂಡ್ರ? ನಿಮ್ಮಂತೋರು ಒಂದ್ನಾಲ್ಕು ಜನ ಇದ್ಬಿಟ್ರೆ, ನಂ ಸಂಸ್ಥೆ ಗೋವಿಂದ ಅಂತ ಅಡ್ರಸ್ ಇಲ್ದೀರ, ಮಣ್ಣು ಹುಯ್ಕೊಂಡ್ಹೋಗುತ್ತೆ ಅಷ್ಟೇ. ನೋಡ್ರೀ ಈ ವಯಸ್ಗೇ ನಿಂಮ್ಮಂತೋರ್ನ ಬಾಳ ಬಾಳ ನೋಡ್ಬಿಟ್ಟಿದೀನಿ. ನನ್ ಮುಂದೆ ನಿಂಬೇಳೆ ಬೇಯಲ್ಲರೀ. ಯಾವ್ದಾದ್ರು ಕೂಲಿ ಮಠಕ್ಕೆ ಮಕ್ಳನ್ನ ಸೇರ್ಸ್ಹೋಗಿ. ತೊಗೊಂಡ್ಹೋಗ್ರಿ, ನಿಂ ಅಪ್ಲಿಕೇಶನ್ನ'' ಅಂತ ರೋಪ್ ಹಾಕಿ, ಅಪ್ಲಿಕೇಶನ್ನ ನನ್ನ ಕಡೆಗೆ ತಳ್ಳಿದರು.

ಪ್ರಿನ್ಸಿಪಾಲರು ನನ್ನ ಮೇಲೆ ರೇಗುತ್ತಿರುವುದಕ್ಕೆ ಕಾರಣ ತಟ್ಟನೆ ಹೊಳೆಯಿತು ನನ್ನ ಟ್ಯೂಬ್ ಲೈಟ್ ಬ್ರೈನ್‌ಗೆ. ತಕ್ಷಣ ''ಸಾSSSS...ರ್ ಒಂದೇ ಒಂದು ಮಗುದು ಈ ಅಪ್ಲಿಕೇಶನ್ನು. ನಂಗೆ ದೇವ್ರು ಕೊಟ್ಟಿರೋದೂ ಇದೊಂದೇ ಮಗು ಸಾರ್. ಸಾರ್, ನನ್ ವೈಫ್ ಆಣೆಗೂ ನಿಜ ಸಾರ್. ಇನ್ಮುಂದೆ, ಬ್ರಹ್ಮಂಗೂ ಆಗಲ್ಲ ಸಾರ್ ಮಕ್ಳು ಕೊಡೋಕೆ, ನೊ ಛಾನ್ಸ್, ರಿಯಲಿ ಸಾರ್'' ಅಂತ ಒಂದೇ ಉಸಿರಿಗೆ ಉದ್ಘೋಷ ಮಾಡಿದೆ.

ಪ್ರಿನ್ಸಿಪಾಲರು ಹುಬ್ಬುಗಂಟು ಹಾಕಿಕೊಂಡು, ತಾವೂ ನನ್ನಷ್ಟೇ ಉದ್ಘೋಷ ಮಾಡಿ

''ರೀ ಮಿಸ್ಟರ್ ಮೆತ್ಗೆ ಮಾತಾಡ್ರಿ, ನಂಗೇನು ಕಿವ್ಡಿಲ್ಲ'' ಅಂತ ಹೇಳಿ, ನನ್ನ ಕೈಲಿದ್ದ ಅಪ್ಲಿಕೇಶನ್ನ ಕಿತ್ತುಕೊಂಡರು. ಅದರ ಮೇಲೆ ಮತ್ತೊಮ್ಮೆ ಕಣ್ಣಾಡಿಸಿ ''ಅಂದ್ರೇ... ನಾಲ್ಕೈದು ಮಕ್ಳಿಗೆ ಇಡ್ಬೇಕಾಗಿರೋ ಹೆಸ್ರುಗ್ಳನ್ನ ಈ ಒಂದ್ಮಗೂಗೇ ಇಟ್ಟಿದ್ದೀರಿ ಅನ್ನಿ. ಅಲ್ರೀ ಚೋಟುದ್ದ ಮಗೂಗೆ ಬಾರುದ್ದ ನೇಮಾ? ಹೆಸ್ರು ಉದ್ದ ಆದಷ್ಟೂ ಮಗು ಬುದ್ಧಿ ಚುರ್ರಾಗುತ್ತಾ? ಈತರ ಒಂದ್ಹತ್ತು ಮಕ್ಳು ಇದ್ಬಿಟ್ರೆ, ಅಟೆಂಡೆಂನ್ಸ್ ತೊಗೊಳೊ ಟೀಚರ್ಗೆ, ಪೀರಿಯಡ್ ಪೂರ್ತಿ ಹೆಸ್ರುಗ್ಳನ್ನೇ ಬಡ್ಕೋತಾನೇ ಇರ್ಬೇಕಾಗುತ್ತೆ ಅಷ್ಟೆ. ಈತರ A ಟು Z ಅಕ್ಷರಗಳು ಇರೋ ಅಂತ ಹೆಸ್ರನ್ನ ನಾ ಇವತ್ತೇ ಕೇಳ್ತಾ ಇರೋದು. ಅಲ್ರೀ ಶಾರ್ಟ್ ಬಟ್ ಸ್ವೀಟ್ ಹೆಸ್ರು ಸಿಕ್ಲೇ ಇಲ್ವಾ ನಿಮ್ಗೆ? ಇಷ್ಟು ಉದ್ದಾದ ಹೆಸ್ರನ್ನ ಮಗು ತಾನೆ ಹ್ಯಾಗ್ರೀ ಜ್ಞಾಪ್ಕ ಇಟ್ಕೊಳುತ್ತೆ? ಎಲ್ಲಿ ಒಂದ್ಸಾರಿ ಮಗು ಬಾಯಿಂದ್ಲೇ ಅವ್ನ ಪೂರ್ತಿ ಹೆಸ್ರು ಹೇಳ್ಸಿ ನೋಡೋಣ'' ಅಂತ ಸವಾಲ್ ಎಸೆದರು.

ನಾನು ನನ್ಮಗನ್ನ ಮುದ್ದಿಸಿ ''ಪಾಪು, ನೀ ಜಾಣ್ಮರೀ ಅಲ್ವಾ? ನಿಂಗೆ ಕಪ್ ಐಸ್‌ಕ್ರೀಮ್ ಕೊಡಿಸ್ತೀನಿ. ನಿನ್ ಹೆಸ್ರು ಹೇಳಮ್ಮಾ, ಪ್ರಿನ್ಸಿಪಾಲ್ ಸಾರ್ ಕೇಳ್ಬೇಕಂತೆ'' ಅಂತ ಪುಸಲಾಯಿಸಿದೆ. ''ಐಸ್‌ಕ್ರಿಮ್'' ಅನ್ನೋಪದ ಕೇಳಿದ ಕೂಡಲೆ ''ನನ್ ಎಚ್ಚು, ನನ್ ಎಚ್ಚು, ಲ..ಚ್ಚೀ, ನಾ..ಲಾ...ಯಣ, ದಚಲತ, ಚೀ..ತಾ..ಲಾ..ಮ, ಚಂಕಲ, ಚುಬ್ಬಲಮಣ, ಕಿಚ್ನಮೂತಿ'' ಅಂತ ಅರಳು ಹುರಿದ ಹಾಗೆ, ಫಟ್‌ಫಟ್ ಅಂತ ಹೇಳಿ, ನನ್ನ ಕುತ್ತಿಗೆಗೆ ತೆಕ್ಕೆ ಬಿದ್ದು ''ಐಸ್‌ಕ್ರಿಮ್ ಕೊಚ್ಚೂ'' ಅಂತ ಪೀಡಿಸತೊಡಗಿದ.

ಪ್ರಿನ್ಸಿಪಾಲರಿಗೆ ಹೊಟ್ಟೆ ಒಳಗಿಂದ ನಗು ಅಬ್ಬರಿಸಿಕೊಂಡು ಹೊರಬಂತು. ಆದರೆ ಅದನ್ನ ತೋರಿಸಿಕೊಳ್ಳದೆ, ಕರವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ''ಹಿಃ ಹಿಃ; ಟೇಪ್ ರಿಕಾರ್ಡ್‌ರ್ನ ಫಾಸ್ಟ್ ಮೋಡ್‌ಗೆ ಇಟ್ಟು, ರಿವರ್ಸ್ ಹೊಡ್ದಾಗಿದೆ. ಅಬಬಬ! ಪರ್ವಾಗಿಲ್ವೇ ಮಗು ಚುರ್ರಾಗಿದಾನೆ'' ಅಂತ ಹೇಳಿಕೊಂಡು, ಆನಂತರ ''ಅಲ್ಲಾ ಮಿಸ್ಟರ್ ಇವ್ರೇ, ಹನುಮಂತನ ಬಾಲ್ದಷ್ಟು ಉದ್ದಾದ ನೇಮ್ ಯಾಕ್ಬೇಕು ಅಂತ ಹೇಳ್ತೀರ ಪ್ಲೀಜ್'' ಅಂತ ಕೇಳಿದರು.

ಇಷ್ಟರಲ್ಲಿ, ನಾನೂ ಸಹ ಒಂದಿಷ್ಟು ಯದ್ವಾತದ್ವ ನಕ್ಕು ಕಂಟ್ರೋಲ್ ಮಾಡ್ಕೊಂಡಿದ್ದೆ. ಪ್ರಿನ್ಸಿಪಾಲರಿಗೆ ಉತ್ತರಿಸಲು ಕಷ್ಟವಾಗಲಿಲ್ಲ. ''ಸಾರ್, ನನ್ ತಂದೆ ಹೆಸ್ರು, ನಂಕುಲದೇವ್ರುಗಳ ಹೆಸ್ರು, ಎಲ್ಲಾ ಪೋಣಿಸಿ, ಮಗೂಗೆ ಎಲ್ಲರ ಆಶೀರ್ವಾದ ಇರ್ಲೀ ಅಂತ ಇಟ್ಟಿರೋ ಹೆಸ್ರು ಸಾರ್. ದೇವಾನುದೇವತೆಗಳು ತಮ್ಮ ತಮ್ಮ ಶಕ್ತಿ, ಆಯುಧಗಳನ್ನು ಚಾಮುಂಡೇಶ್ವರಿ ದೇವಿಗೆ ಕೊಟ್ಟು, ಆ ತಾಯನ್ನು ಮಹಾಶಕ್ತಿಯನ್ನಾಗಿ ಮಾಡಿದ್ರಲ್ಲ, ಹಾಗೇ ಸಾರ್ ಈ ಕೇಸೂ. ಸಾರ್ ದಯ್ವಿಟ್ಟು ಹೆಸ್ರನ್ನ ಇರೋ ಹಾಗೆ ಇಡಿ ಸಾರ್. ಇಲ್ದೇ ಇದ್ರೆ ಮನೇಲಿ ರಂಪು ರಾದ್ಧಾಂತ ಆಗ್ಬಿಡುತ್ತೇ. ಬೇಕಾದ್ರೆ ಇನ್ನೊಂದು ಐನೂರು ಜಾಸ್ತಿ ಕೊಡ್ತೀನಿ ಸಾರ್, ನೀವೇನೂ ಅದಕ್ಕೆ ರಸೀದಿ ಕೊಡ್ಬೇಡಿ ಸಾರ್'' ಅಂತ ಪ್ರಾರ್ಥಿಸಿದೆ.

ಪ್ರಿನ್ಸಿಪಾಲರು ತಕ್ಷಣ ಒಪ್ಪಿಗೆ ನೀಡಿ, ''ಟ್ರಿನ್'' ಅಂತ ಬೆಲ್ ಒತ್ತಿದರು. ಕೂಡಲೆ ''ಕರದ್ರಾ ಸಾರ್?'' ಅಂತ ಕೇಳುತ್ತಾ ಆಫೀಸ್ ಕ್ಲಾರ್ಕ್ ಒಳಬಂದ.

ಪ್ರಿನ್ಸಿಪಾಲರು ಅಪ್ಲಿಕೇಶನ್ ಮೇಲೆ ಅಡ್‌ಮಿಟ್ ಅಂತ ಗೀಚಿ ಸಹಿಹಾಕಿ ಕ್ಲಾರ್ಕ್‌ಗೆ ಕೊಡುತ್ತಾ ''ನೋಡ್ರೀ ಇವ್ರೆ, ಈ ಮಗೂ ಹೆಸ್ರು ವಿಷ್ಣು ಸಹಸ್ರನಾಮ ಇದ್ದಷ್ಟು ಉದ್ದ ಇದೆ. ರಿಜಿಸ್ಟರ್‌ನಲ್ಲಿ ಫುಲ್ಲಾಗಿ ಬರ್ಕೊಳ್ಳಿ. ಆದ್ರೇ ಕ್ಲಾಸಲ್ಲಿ ಸಿಂಪಲ್ಲಾಗಿ A ಟು Z ಮೂರ್ತಿ ಅಂತ ಕರೀರಿ. ಇಲ್ದೇ ಇದ್ರೇ ಕ್ಲಾಸಲ್ಲಿರೋ ಚಿಳ್ಳೆ ಪಿಳ್ಳೆಗಳೆಲ್ಲಾ 'ನನ್ನ ಹೆಸ್ರು ಕರೆದ್ರು, ನನ್ನ ಹೆಸ್ರು ಕರೆದ್ರು' ಅಂತ ಮುತ್ಕೋಳುತ್ವೆ'' ಅಂತ ಹೇಳಿ ನನ್ನ ಕಡೆಗೆ ವ್ಯಂಗ್ಯವಾಗಿ ನೋಡಿ ಲಘುವಾಗಿ ಹಣೆ ಚಚ್ಚಿಕೊಂಡರು.

ನಂಗೆ ಸಿಟ್ಟು ಬಂತು, ''ಸಾರ್, ರಸೀದಿ ಕೇಳ್ದೀರಾನೆ ಐನೂರು ಕೊಟ್ಟೆ. ಈಗ ನೋಡಿದ್ರೆ ಪೂರ್ತಿ ಹೆಸ್ರು ಕೂಗಲ್ಲ ಅಂತೀರಲ್ಲ ಸಾರ್'' ಅಂತ ಸೌಜನ್ಯದಿಂದ ಪ್ರತಿಭಟಿಸಿದೆ.

ಪ್ರಿನ್ಸಿಪಾಲರು ನನ್ನ ಕಡೆಗೆ ನೋಡದೇ ''ಆಯ್ತು ಹೋಗೀಪ್ಪಾ ನನ್ ತಲೆ ಚಿಟ್‌ಹಿಡಿಸ್ಬೇಡಿ. ಹೊರ್ಗಡೆ ನಿಮ್ಮಂಥೋರು ಹಿಂಡು ಜನ ಇಂಟರ್‌ವ್ಯೂಗೆ ಕಾಯ್ತಾ ಇದಾರೆ. ನಿಮ್ ಹರ್ಕಥೆ ಕೇಳೋಕೆ ನಂಗೆ ಟೈಮ್ ಇಲ್ಲ. ಪ್ಲೀಜ್ ಬೇಗ ಬೇಗ ಖಾಲಿಮಾಡಿ'' ಅಂತ ನಂಗೆ ಆಜ್ಞೆ ಮಾಡಿದರು.

''ಚಿಕ್ಕಾದ ಹೆಸ್ರು ಇಟ್ಟಿದ್ದಿದ್ದರೆ ಐನೂರು ಉಳೀತಿತ್ತು'' ಅಂತ ಗೊಣಗಿಕೊಂಡು ಮಗುವಿನೊಂದಿಗೆ ಆಚೆಗೆ ನಡೆದೆ.

ಅದೇ ದಿನದಿಂದ ನನ್ ಮಗಂಗೆ A ಟು Z ಮೂರ್ತಿ ಅನ್ನೋ ಇನ್ನೊಂದು ಹೆಸರು ಸೇರ್ಪಡೆ ಆಯಿತು.

ನಮ್ಮಜ್ಜಿ ಈ ಹೊಸ ಹೆಸ್ರು ಕೇಳಿದಾಗ ''ಇದೇನೋ ಮಗು, ನಾಚಿಕ್ಕೇಡು, ಆ ಪಾಟಿ ದೇವ್ರ ಹೆಸ್ರು ಇತ್ತು. ಅವನ್ನೆಲ್ಲಾ ಬಿಟ್ಟು ಅದ್ಯಾಕೋ ''ಏನ್ ಜೆಡ್ಡು'' ಅಂತ ಹೆಸ್ರಿಟ್ಟಂತೆ. ಜೆಡ್ಡು, ಮೈಲ್ಗೆ, ಮುಸ್ರೆ ಇವೆಲ್ಲಾ ಒಂದು ಹೆಸ್ರ? ನೀ ಏನಾದ್ರೂ ತಿಳ್ಕೊ, ನೀ ಮಾಡಿದ್ದು ನಂಗೆ ಸುತ್ರಾಂ ಸರಿ ಬೀಳ್ಳಿಲ್ಲ. ಕೈಕಾಲಲ್ಲಿ ತ್ರಾಣ ಇದ್ದಿದ್ರೇ, ಕಾಶೀಗೋ, ರಾಮೇಶ್ವರಕ್ಕೋ ಹೊರ್ಟೋಗ್ತಿದ್ದೆ'' ಅಂತ ಪೇಚಾಡಿಕೊಂಡರು. ಅವರಿಗೆ ಅರ್ಥ ಆಗೋ ಹಾಗೆ ವಿವರಿಸೋಷ್ಟತ್ತಿಗೆ ನನಗೆ ಸಾಕಾಗಿ ಹೋಯಿತು.

ಈಗಾಗ್ಲೇ ಬಳಕೆಯಲ್ಲಿರೋ ''ಇಪ್ಪತ್ತು ಪ್ಲಸ್'' ಹೆಸರುಗಳ ಜೊತೆಗೆ ''A ಟು Z, ಏನ್ ಜೆಡ್ಡು'' ಅನ್ನೋ ಹೆಸರುಗಳು ಸೇರಿಕೊಂಡವು. ನಂತಾಯಿಗೆ, ಈ ಅಪರೂಪದ ಮೊಮ್ಮಗನ ಮೇಲೆ ಎಲ್ಲಿ ಇಲ್ಲದಷ್ಟು ಮಮತೆ. ಅವರಿಗೆ ಇವನ ಹೆಸರು ''ನಾಣಿ, ಲಚ್ಚೂ, ಲಕ್ಷ್ಮೀನಾರಾಯಣಿ, ಲಚ್ಚುಪುಟ್ಟಿ, ನಾಣಿದೇವ್ರು, ನಾಣಿಚಿನ್ನಿ'' ಇತ್ಯಾದಿ. ನಮ್ಮತ್ತೆ ಕೂಗೋದು ''ದಶರಥೂ, ದಾಶಿ, ದಾಚುಕಂದ, ದಾಚ್ಗ, ದಾಚಾಪಾಪು''. ಹೀಗೇ ಸೋದರಮಾವು, ಸೋದರಅತ್ತೆ, ಚಿಕ್ಕಮ್ಮ, ಚಿಕ್ಕಪ್ಪ ಎಲ್ಲರೂ ಅವರವರ ಭಾವಕ್ಕೆ, ಅವರವರ ಇಷ್ಟಕ್ಕೆ, ಅವರವರ ಮೂಡಿಗೆ ತಕ್ಕಂತೆ, ಒಂದೊಂದು ಹೆಸರನ್ನೂ ಮೊಟಕುಗೊಳಿಸಿ, ವಿಕೃತಿ ಮಾಡಿ ಕರೆದರೇ ಮಾತ್ರ ತೃಪ್ತಿ. ನನ್ನ ಮಗ ಇಷ್ಟೊಂದು ಹೆಸರುಗಳನ್ನೆಲ್ಲಾ ಸ್ಪಷ್ಟವಾಗಿ ನೆನಪಿನಲ್ಲಿ ಇಟ್ಟುಕೊಂಡಿರುವುದು ನಿಜಕ್ಕೂ ಮೆಚ್ಚುವಂತಹ ವಿಷಯವೇ ಸರಿ.

ಸ್ವಲ್ಪ ದಿನಗಳಾದ ಮೇಲೆ ಮಗು ಏಕೋ ಏನೋ ಮಂಕಾಗಿ ಹೋದ. ಊಟ ಸರಿಯಾಗಿ ಮಾಡುತ್ತಿರಲಿಲ್ಲ. ಮನೆಯಲ್ಲಿ ಎಲ್ಲರ ಗಮನ ಬಹುನಾಮದ ಚುಲ್ಬಾರಿಯ ಕಡೆಗೆ ಹರಿಯಿತು. ಅವರವರಿಗೆ ತೋಚಿದಂತೆ ಸಲಹೆಗಳನ್ನು ಧಾರಾಳವಾಗಿ ನೀಡತೊಡಗಿದರು. ಆದರೆ ನಂ ಅಜ್ಜಿ ಕೊಟ್ಟ ಸಲಹೆ ಮಾತ್ರ ನನಗೆ ಸೂಕ್ತ ಅಂತ ಕಂಡಿತು. ಅದರಂತೆ ಮಗುವಿನ ಜಾತಕವನ್ನು ಜ್ಯೋತಿಷ್ಯನೊಬ್ಬನಿಗೆ ತೋರಿಸಿದೆ. ಆತ ಜಾತಕವನ್ನು ಕೂಲಂಕಷವಾಗಿ ಪರಿಶೀಲಿಸಿ ''ನೋಡಿ ಮಿಸ್ಟರ್, ಮೂಗಿಗಿಂತ ಮೂಗ್ತೀನೆ ಭಾರ ಅನ್ನೋ ಹಾಗೆ, ಗೇಣುದ್ದ ಮಗೂಗೆ ಆಳುದ್ದ ಹೆಸ್ರು ಇಟ್ಟಿದ್ದೀರಿ. ಈ ಗೊಂಚಲು ಹೆಸ್ರಲ್ಲಿ ಅವನ ನಕ್ಷತ್ರಕ್ಕೆ ತೃಪ್ತಿ ಆಗೋ ಅಂತ ಒಂದು ಹೆಸ್ರೂ ಇಲ್ಲ. ಹೀಗಾಗಿ ಮಗೂಗೆ ಅನಾರೋಗ್ಯ ಶುರು ಆಗಿದೆ. ಇದಕ್ಕೆ ಪರಿಹಾರ ಅಂದ್ರೇ, ಮಗೂಗೆ ಪಿ, ಪೀ, ಪು, ಪೂ ಅನ್ನೋ ಅಕ್ಷರಗಳಿಂದ ಶುರು ಆಗೋ ಅಂತ ಹೆಸ್ರಿಟ್ರೇ, ನೋಡ್ರಪ, ಮಗು ಗೆಲುವಾಗ್ತಾನೆ. ಆಮೇಲೆ ಹಂದೀ, ಹಂದಿ ತರ ತಿಂದು, ಗೂಳಿ ತರ ಆಗ್ತಾನೆ'', ಅಂತ ಭವಿಷ್ಯ ನುಡಿದು, ನೂರು ರೂಪಾಯಿ ಬೋಳಿಸಿದರು.

ಜ್ಯೋತಿಷ್ಯಗಾರನ ತೀರ್ಪನ್ನು ಮನೆಯವರ ಮುಂದಿಟ್ಟು, ಅವರೆಲ್ಲಾ ಒಮ್ಮತಕ್ಕೆ ಬರುವಂತೆ ಮಾಡಿ, ಮಾರುದ್ದದ ಹೆಸರಿನ ಬದಲು ಪುಂಡರೀಕಾಕ್ಷ ಅನ್ನೋ ಹೆಸರನ್ನು ಪ್ರತಿಷ್ಠಾಪಿಸಿದೆ. ಹಾಗೇ ಸ್ಕೂಲಿಗೆ ಹೋಗಿ ಪ್ರಿನ್ಸಿಪಾಲರನ್ನು ಕಂಡು, ಒಂದಿಷ್ಟು ದುಡ್ಡು ಕಕ್ಕಿ, ಉದ್ದನೆಯ ಹೆಸರಿನ ಬದಲು ಪುಂಡರೀಕಾಕ್ಷ ಅನ್ನೋ ಹೆಸರಿಗೆ ಬದಲಾಯಿಸಿಕೊಂಡು ಬಂದೆ.

ಅಂದೇ, ನನ್ನ ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಐಸ್‌ಕ್ರೀಮ್ ಕೊಟ್ಟು, ಪ್ರೀತಿಯಿಂದ ''ಮರಿ, ಇವತ್ತಿಂದ ನಿನ್ನ ಹೆಸ್ರು ಏನೂ, ಪುಂಡರೀಕಾಕ್ಷ, ಬೇರೆ ಯಾವ ಹೆಸ್ರಿಂದ ಕರೆದ್ರೂ ಮಾತಾಡ್ಬೇಡ'' ಅಂತ ಬ್ರೈನ್‌ವಾಷ್ ಮಾಡಿದೆ.

ಐಸ್‌ಕ್ರೀಮ್ ಮುಗಿದು ಹೋಗೋ ತನಕ ಒಂದು ಮಾತೂ ಆಡದೆ ನಾ ಹೇಳಿದ್ದಕ್ಕೆಲ್ಲಾ ಹ್ಞೂಗುಟ್ಟುತ್ತಿದ್ದವನು, ಅದು ಮುಗಿದ ತಕ್ಷಣ ''ನನ್ ಎಚ್ಲೂ.... ನನ್ ಎಚ್ಲೂ.... ಲಚ್ಚೀ... ನಾ...ಲಾ...ಯಣ....ಮೂತಿ'' ಅಂತ ಪಟಪಟನೆ ಗುಟ್ಟತೊಡಗಿದ. ಐಸ್‌ಕ್ರೀಮಿನ ತಣವು ಅವನ ನಾಲಗೆಯನ್ನು ಇನ್ನಷ್ಟು ಮೊದ್ದುಗಳಿಸಿತ್ತು.

''ತತ್ ನಿನ್ನ, ನಿನ್ನ ಹೆಸ್ರು ಪುಂಡರೀಕಾಕ್ಷ, ನಿನ್ನ ಹೆಸ್ರು ಪುಂಡರೀಕಾಕ್ಷ'' ಅಂತ ಏರಿಸಿದ ಧಾಟಿಯಲ್ಲಿ ಹೇಳಿದೆ.

''ಉಹೂಃ ನನ್ ಎಚ್ಲೂ ಲಚ್ಚೀ.....ಮೂತಿ''.

''ನೀ ಹೀಗೆಲ್ಲಾ ಹಠ ಮಾಡಿದ್ರೆ ಐಸ್‌ಕ್ರೀಮ್ ಕೊಡ್ಸೋದೇ ಇಲ್ಲ. ನೀನು ಜಾಣ, ಅಲ್ವಾ?''

''ನನ್ ಎಚ್ಲು.. ಲ...ಚ್ಚೀ.....ಮೂತಿ'' ಅದೇ ರಾಗ, ಅದೇ ಹಾಡು ಅವನದಾಯಿತು.

ನಂಗೆ ರೇಗಿತು. ''ಅಯ್ಯೊ ಅಯ್ಯೊ ಪ್ರಾರಬ್ಧವೇ, ನಿನ್ ಹೆಸ್ರು ಪುಂಡರೀಕಾಕ್ಷ ಕಣೋ ಮುಂಡೇದೇ, ಪುಂಡ..ರೀಕಾಕ್ಷ'' ಅಂತ ಕೆನ್ನೆಗೆ ಬಿಗಿದೆ. ಏಟು ಎಳೇ ಕೆನ್ನೆಗಳಿಗೆ

ಸ್ವಲ್ಪ ಜೋರಾಗಿ ಬಿದ್ದಿರಬೇಕು. ಕೆನ್ನೆ ಕೆಂಪಾಯಿತು. ನೋವಿನಿಂದ ಮಿನುಗುವ ಕಣ್ಣುಗಳಲ್ಲಿ ನೀರಾಡಿತು. ಆದರೂ ''ನನ್ ಎಚ್ಲು ಲಚ್ಚೀ....ಮೂತಿ'' ಅಂತ ಹೇಳುವುದ್ನನ ಮಾತ್ರ ಬಿಡಲಿಲ್ಲ.

ನನ್ನ ಸಹನೆ ಮುರಿದು ಬಿತ್ತು. ಕೋಪ ನೆತ್ತಿಗೇರಿತು. ಆವೇಶದಿಂದ ಬೆತ್ತವನ್ನು ಕತ್ತಿಯಂತೆ ಝಳಪಿಸುತ್ತಾ ''ನೀಚ, ಪಿತೃದ್ರೋಹಿ, ಜನ್ಮ ಕೊಟ್ಟ ತಂದೆಗೆ ತಿರುಮಂತ್ರ ಹೇಳ್ತೀಯ? ನಿನ್ನ ಏನ್ಮಾಡ್ತೀನಿ ನೋಡ್ತಾ ಇರು'' ಅಂತ ಆರ್ಭಟಿಸಿದೆ.

ನನ್ನ ಆರ್ಭಟಕ್ಕೆ ಅವನು ಒಂದಿಷ್ಟೂ ಬೆದರಲಿಲ್ಲ, ನಡುಗಲೂ ಇಲ್ಲ. ನಗುನಗುತ್ತಾ ''ಅಪ್ಪಾ... ನನ್..ಎಚ್ಲು...ಲ..ಚ್ಚೀ.....ಮೂತಿ'' ಅಂತ ಪುನರುತ್ತಿಸಿ, ನನ್ನನ್ನು ಮತ್ತಷ್ಟು ಕೆಣಕಿದ.

ಮೈ ಪರಚಿಕೊಳ್ಳಲೇ ಅನಿಸಿತು ನನಗೆ. ಹಲ್ಲು ಕಡಿಯುತ್ತಾ ಅವನ ಜುಟ್ಟನ್ನು ಹಿಡಿದು, ಮುಷ್ಟಿಯನ್ನು ಮೇಲೆತ್ತಿ, ನಾಲ್ಕೈದು ತದುಕೋಣ ಅಂತಿದ್ದೆ. ಆದರೆ ಅಷ್ಟರಲ್ಲಿ ನಂತಾತ ಎಲ್ಲೋ ಇದ್ದವರು, ಮಹಾವಿಷ್ಣುವಿನಂತೆ ಬಂದು, ಮಗುವನ್ನು ಅಪ್ಪಿಹಿಡಿದು ''ನಿಲ್ಲೋ ಸಾಕು ಕಂಡಿದೀನಿ ನಿನ್ನ ಒಣಕ್ಲು ಪೌರುಷಾನ. ಮಹಾ, ಹಿರಣ್ಯಕಶಿಪು ನೀನು. ನಿನ್ ಮಗ ಪ್ರಹ್ಲಾದ ಅಲ್ವಾ? ನಾಟ್ಕ ಚೆನ್ನಾಗಿದೆ'' ಅಂತ ದಬಾಯಿಸಿದರು.

''ತಾತ ನೀವು ಸುಮ್ನಿರಿ. ಇವ್ನಿಂದ ನಂಗೆ ಈಗಾಗ್ಲೆ ಎರ್ಡು ಸಾಪ್ರ ನೀರಿಲ್ದ ಕ್ಷೌರ ಆಯ್ತು. ಸ್ಕೂಲ್ ಪ್ರಿನ್ಸಿಪಾಲರಿಂದ ಮಂಗ್ಳಾರ್ತಿ ಆಯ್ತು. 'ನಿಮ್ಗೇನು ತಲೆಗಿಲೆ ಇದ್ಯಾ? ಹುಚ್ಚುಚ್ಚಾಗಿ ನೇಮ್ ಬದ್ಲಾಯ್ಸೋದು ಅಂದ್ರೆ ಏನ್ರಿ ಅರ್ಥ. ರೋಡ್ ನೇಮ್ಸ್ ಛೇಂಜ್ ಮಾಡ್ತಾರಲ್ಲ ಹಾಗೆ ಅಂದ್ಕೊಂಡ್ರ? ಟಿಸಿ ಕೊಡ್ತೀನಿ ಬೇರೆ ಸ್ಕೂಲ್ಗೆ ಸೇರ್ಸಿ. ನಿಂಮ್ಮಂತ ತರ್ಲೆ ಜನ ನಮ್ಗೆ ಬೇಡ್ವೇ ಬೇಡ' ಅಂತ ಬೈದು ಕಳ್ಸುದ್ರು. ಎಲ್ಲಾ ಇವ್ನಿಂದ್ಲೆ'' ಅಂತ ವಿವರಿಸಿದೆ.

''ಅಯ್ಯೋ ನಿನ್ ಮನೆ ಕಾಯ್ವಾಗಿ ಹೋಗ. ಏನೂ ಅರೀದ ಮಗು ಹ್ಯಾಗೋ ಕಾಲ್ದ ಆಯ್ತು. ಇದೇ ಹೆಸ್ರು, ಇರ್ಲಿ ಅಂತ ಅದಕ್ಕೇನು ತಿಳೀಯುತ್ತೆ ಹೇಳು? ನೋಡೋ ನೀನೇನಾದಾದ್ರು, ಮಗೂನ ಹೊಡ್ದುಬಡ್ದು ಮಾಡ್ದ್ಯೋ ನಾನು ಮನೆ ಬಿಟ್ಟು ಹೊರ್ಟ್ಹೋಗ್ತೀನಿ ಅಷ್ಟೇ'' ಅಂತ ಹೆದರಿಸಿದರು.

ನರಸಿಂಹನಂತೆ ಬಂದ ನಂತಾತ, ಹಿರಣ್ಯಕಶಿಪುವಿನಂತಿದ್ದ ನನ್ನನ್ನು ಕ್ಲೀನಾಗಿ ಬೋಲ್ಡ್ ಮಾಡಿಬಿಟ್ಟರು. ''ಬಿದ್ರೂ ಮೀಸೆ ಮಣ್ಣಾಗ್ಲಿಲ್ಲ'' ಅನ್ನೋಹಾಗೆ ನಾ ಹೇಳ್ದೆ. ''ದೊಡ್ಡೋರ ಮಾತು ಮೀರೋಕಾಗುತ್ಯೇ? ಬಿಡಿ, ಉದ್ದನೆ ಹೆಸ್ರೂ ಒಂಥರಾ ಚೆನ್ನಾಗಿರುತ್ತೆ'' ಅಂತ ಸೋತು, ಮಗುವನ್ನು ಎತ್ತಿ ಮುದ್ದಿಸಿದೆ. ಆಗಲೂ ನನ್ಮಗ ''ನನ್ ಎಚ್ಲು, ಲಚ್ಚೀ....ಮೂತಿ ಅಲ್ವಾ ಅಪ್ಪಾ?'' ಅಂತ ಕೇಳಿದ.

ಮಗುವಿನ ಇನ್ನೊಂದು ಮುತ್ತಿಟ್ಟು ಹೇಳಿದೆ ''ಹೌದೋ ರಾಜ, ಪ್ರಹ್ಲಾದ ಗೆದ್ದ, ಹಿರಣ್ಯಕಶಿಪು ಎರ್ಡು ಸಾಪ್ರ ಬೋಳುಸ್ಕೊಂಡ'' ಅಂತ ಅಂದಾಗ ಎಲ್ಲಾ ಗೊಳ್ಳೆಂದು ನಗೆಯಾಡಿದರು.

ಇಷ್ಟು ಕೇಳಿದ್ಮೇಲೂ ''ಹೆಸ್ರಲ್ಲೇನಿದೆ ಮಹಾ?'' ಅಂತೀರಾ? ಕೇಳಿ ಹೇಳ್ತೀನಿ, ನನ್ಮಗ ಮುಂಚಿನ ಹೆಸ್ರೊಂದಿಗೆ ಹಂದಿ ತರ ತಿಂದ್ಕೊಂಡು, ಗೂಳಿ ತರ ಆಗ್ತಾ ಇದಾನೆ.

## ದಯವಿಟ್ಟು ಇದನ್ನು ಜೋಕ್ ಎಂದು ತಿಳಿಯಬೇಡಿ

ಏರುತ್ತಿರುವ ಕಾಗದದ ಬೆಲೆ, ಮುದ್ರಣದ ವೆಚ್ಚ, ಇವುಗಳನ್ನು ಭರಿಸಿಯೂ ಅಪರಂಜಿ ಆರೋಗ್ಯವಾಗಿ ಬದುಕಬೇಕಾದರೆ ವಾರ್ಷಿಕ ಚಂದಾ ಹಾಗೂ ಆಜೀವ ಚಂದಾ ಇವುಗಳ ದರಗಳನ್ನು ಹೆಚ್ಚಿಸುವುದು ಅನಿವಾರ್ಯವಾಗಿದೆ. ಇದೇ ಸಂದರ್ಭದಲ್ಲಿ "ಆಜೀವ ಚಂದಾ" ಎಂಬ ಪದಸಮುಚ್ಚಯದ ವಿವರಣೆಯೂ ಅಗತ್ಯವೆಂದು ನಮ್ಮ ಅನಿಸಿಕೆ. ಯಾರ್‍ಯಾರ ಆಯಸ್ಸು ಎಷ್ಟು ಎಂದು ಲೆಕ್ಕ ಹಾಕುವುದಕ್ಕಿಂತ ಇನ್ನೂ ಉತ್ತಮವಾದ ಕ್ರಮವೊಂದನ್ನು ನಿಮ್ಮ ಮುಂದಿಡುತ್ತಿದ್ದೇವೆ. 'ಆಜೀವ ಚಂದಾ' ಎಂದು ನಾವು ಸಾಮಾನ್ಯವಾಗಿ ಹತ್ತು ವರುಷಗಳ ಚಂದಾ ಹಣವನ್ನು ಒಟ್ಟಿಗೇ ಸಂಗ್ರಹಿಸುವುದು ವಾಡಿಕೆ. ನೀವು ಆಜೀವ ಚಂದಾ ನೀಡಿದ ಸಮಯದಿಂದ, ಹತ್ತು ವರುಷಕ್ಕೆ ಮುಂಚೆಯೆ, ಅನಿವಾರ್ಯ ಕಾರಣಗಳಿಂದ ಪತ್ರಿಕೆ ನಿಲ್ಲುವಂತಾದರೆ ಪ್ರಪೊರ್ಷನಲ್ ಮೊತ್ತವನ್ನು ನಿಮಗೆ ಹಿಂತಿರುಗಿಸಲಾಗುವುದು. ಹತ್ತು ವರುಷದ ನಂತರವೂ ಸಹಾ ಪತ್ರಿಕೆ ನಿಮಗೆ ನಿರಂತರವಾಗಿ ಬರುತ್ತಿದ್ದು, ಆ ಸಮಯದಲ್ಲಿ ಪತ್ರಿಕೆ ನಿಂತರೆ ನಿಮಗೆ ಯಾವ ಮೊತ್ತವನ್ನೂ ಹಿಂತಿರುಗಿಸಲಾಗುವುದಿಲ್ಲ. ಈ ಹೊಸ ವ್ಯವಸ್ಥೆ fair & reasonable ಎಂದು ನಮ್ಮ ಅಭಿಪ್ರಾಯ.

ಹೊಸ ಚಂದಾದರಗಳ ವಿವರ ಹೀಗಿದೆ:

ಯುಗಾದಿ ವಿಶೇಷಾಂಕ ಸೇರಿದಂತೆ

| | | | |
|---|---|---|---|
| ಹನ್ನೆರಡು ಸಂಚಿಕೆಗಳ ವಾರ್ಷಿಕ ಚಂದಾ | : | ರೂ. | 35/- |
| ಆಜೀವ ಚಂದಾ | : | ರೂ. | 350/- |
| ಬಿಡಿಪ್ರತಿ | : | ರೂ. | 3=50 |
| ಯುಗಾದಿಯ ವಿಶೇಷಾಂಕ | : | ರೂ. | 10=00 |

(ಚಂದಾದಾರರಿಗೆ ಉಚಿತ)

(ಸೂಚನೆ:- ಈ ಹೊಸ ದರಗಳು, ಹೊಸ ಆಜೀವ ಚಂದಾದಾರರಿಗೆ ಹಾಗೂ ಚಂದಾ ನವೀಕರಣಕ್ಕೆ ಮಾತ್ರ ಅನ್ವಯಿಸುತ್ತದೆ. ಈಗಾಗಲೇ ಚಂದಾದಾರರಾಗಿರುವವರು ಚಂದಾ ಅವಧಿ ಮುಗಿಯುವವರೆಗೂ ಹೆಚ್ಚುವರಿ ಹಣ ಕಳಿಸಬೇಕಾಗಿಲ್ಲ.)

ಈ ಹೊಸ ದರಗಳನ್ನು ನಮ್ಮ ಓದುಗರು ಸಹಾನುಭೂತಿಯಿಂದ ಸ್ವಾಗತಿಸುವರೆಂದು ನಮ್ಮ ನಂಬಿಕೆ. ಅ.ರಾ.ಸೇ. ಹೇಳುವಂತೆ ವಿಶ್ವಾಸ ಏಕರೀತಿ ಇರಲಿ.

ನಿಮ್ಮವ

ಶಿವಕುಮಾರ್

